# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 19 ಅಕ್ಟೋಬರ್ 1 ರಿಂದ 15-1998 ಪುಟಗಳು : 24 ರೂ. 5



ವಿಶ್ವವಿಖ್ಯಾತ
ಮೈಸೂರಿನ
ಅರಮನೆ



ಖಾಸಗಿ ದರ್ಬಾರ್ ಉಡುಪಿನಲ್ಲಿ ಮೈಸೂರು ರಾಜ ವಂಶಸ್ಥ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಮತ್ತು ಪತ್ನಿ ಪ್ರಮೋದಾದೇವಿ



ರತ್ನ ಖಚಿತ ಅಂಬಾರಿಯೊಂದಿಗೆ ದೇವಿ ಚಾಮುಂಡೇಶ್ವರಿಯನ್ನು ಹೊತ್ತ ಬಲರಾಮ

## ಪ್ರೀತಿಯ ಕಣ್ಮಣಿ ನೇಹ



4ನೇ ತರಗತಿ, ಸೆಂಟ್ ಚಾರ್ಲ್ಸ್ ಕಾನ್ವೆಂಟ್
ಭದ್ರಾವತಿ

ನಿನ್ನ ಬಾಳು ಚಿರಾಯುವಾಗಲೆಂದು
8ನೇ ವರ್ಷದ ಹುಟ್ಟು ಹಬ್ಬಕ್ಕೆ
ಶುಭಾಶಯವನ್ನು ಕೋರುವ

ದಾದ ಮುತ್ತು ಅವ್ವ
ಹೊದ್ದೂರು

ತಾತ ಮುತ್ತು ಅಮ್ಮ
ಮೈಸೂರು



# ಕೊಡಗು ದರ್ಶಣಂ

(ಕಾದಂಬರಿ)

ಕನ್ನಡ, ಇಂಗ್ಲೀಷ್, ಉರ್ದು, ಭಾಷೆಯಲ್ಲಿ

ದಿನಾಂಕ : **25-1-1999**ರಂದು

ಬೆಂಗಳೂರಿನ ಕರ್ನಾಟಕ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ
ಬಿಡುಗಡೆಯಾಗಲಿದೆ.

ಲೇಖಕರು : **ಕೂಡಕಂಡಿ ಉತ್ತಯ್ಯ ಅಶೋಕ್**

## ಗೌಡರ ಗೌಡರಿಗೆ ಪ್ರಶಸ್ತಿಗಳ ಸರಮಾಲೆ
## ಕುರುಂಜಿ ವೆಂಕಟರಮಣ ಗೌಡರಿಗೆ
## 'ಕಾರಂತ ಪರಿಸರ ರತ್ನ' ಪ್ರಶಸ್ತಿ



ಅಕಾಡೆಮಿ ಆಫ್ ಲಿಬರಲ್ ಎಜುಕೇಷನ್ನಿನ ಸ್ಥಾಪಕಾಧ್ಯಕ್ಷ ಕುರುಂಜಿ ವೆಂಕಟರಮಣಗೌಡ ಅವರಿಗೆ ರಾಷ್ಟ್ರೀಯ ಮಾಲಿನ್ಯ ನಿಯಂತ್ರಣ ಮತ್ತು ಪರಿಸರ ಹಿತರಕ್ಷಣಾ ಸಮಿತಿ ಆಶ್ರಯದಲ್ಲಿ ಶಿವರಾಮ ಕಾರಂತ ಇಂಟರ್‌ನ್ಯಾಷನಲ್ ಪ್ರತಿ ವರ್ಷ ಕೊಡುವ **"ಕಾರಂತ ಪರಿಸರ ರತ್ನ"** ಪ್ರಶಸ್ತಿಯನ್ನು ಈ ಸಾಲಿನಲ್ಲಿ ಕೊಡಲಾಗಿದೆ.

ಮಾಲಿನ್ಯ ನಿಯಂತ್ರಣ ಮತ್ತು ಪರಿಸರ ಸಂರಕ್ಷಣೆಗಾಗಿ ಸಲ್ಲಿಸಿದ ಸೇವೆಗೆ ಕುರುಂಜಿ ಅವರನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗಿದ್ದು, ನಗರ ಪರಿಸ್ಥಿತಿ ಮತ್ತು ಜಲ, ವಾಯು ಮಾಲಿನ್ಯದ ಬಗ್ಗೆ ಶಿವರಾಮ ಕಾರಂತರ ಸ್ಮರಣಾರ್ಥ ಸೆಪ್ಟಂಬರ್ 24 ರಂದು ಬೆಂಗಳೂರಿನಲ್ಲಿ ನಡೆದ ಅಂತರಾಷ್ಟ್ರೀಯ ಸಮಾವೇಶದಲ್ಲಿ ಈ ಪ್ರಶಸ್ತಿಯನ್ನು ಪ್ರಧಾನ ಮಾಡಲಾಯಿತು.

ಶ್ರೀಯುತರಿಗೆ ಈ ಮೊದಲು 1995ರಲ್ಲಿ ರಾಜೀವ್ ಗಾಂಧಿ ರಾಷ್ಟ್ರೀಯ ಪ್ರಶಸ್ತಿ, 95ರಲ್ಲಿ ನ್ಯೂಯಿಯರ್ ವಾರ್ಡ್ ಬೈ ಜನರಲ್ ಎಜುಕೇಷನ್, 97ರಲ್ಲಿ ಗ್ಲೋರಿ ಆಫ್ ಇಂಡಿಯಾ ಮತ್ತು 98ರಲ್ಲಿ ನ್ಯಾಷನಲ್ ಎಜುಕೇಷನ್ ಎಕ್ಸಿಲೆನ್ಸ್ ಅವಾರ್ಡ್ ಹಾಗೂ ರಾಜೀವ್‌ಗಾಂಧಿ ರಾಷ್ಟ್ರೀಯ ಪ್ರಶಸ್ತಿಗಳು ದೊರೆತಿವೆ.

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು–12.
ಫೋನ್ : 516771

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಕೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ–571 201

## ಒಳನೋಟ

ಪುಟಗಳು



## ಅರೆ ಭಾಷೆಕ ವಿಭಾಗ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ

## ನಾಗರೀಕತೆ–ಸಂಸ್ಕೃತಿ

ಸರ್ವ ಸಾಮಾನ್ಯವಾಗಿ ಹೆಚ್ಚಿನವರಿಗೆ ನಾಗರೀಕತೆಗೂ–ಸಂಸ್ಕೃತಿಗೂ ವ್ಯತ್ಯಾಸ ಗೊತ್ತಿಲ್ಲದ ಪರಿಸ್ಥಿತಿ ಇದೆ. ನಾಗರೀಕತೆ ಒಬ್ಬ ಮನುಷ್ಯನ, ಸಮಾಜದ, ರಾಷ್ಟ್ರದ, ಪ್ರಾಪಂಚಿಕ ಅಭಿವೃದ್ಧಿಯನ್ನು ನಾಗರೀಕತೆ ಎಂದು ಕರೆಯುತ್ತಾರೆ. ಸಂಸ್ಕೃತಿಯು ಒಬ್ಬ ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿಯತ್ತ ಸಾಧನೆಯಾಗಿದೆ. **ಒಬ್ಬ ಮನುಷ್ಯ ಸುಸಂಸ್ಕೃತನಾಗಿದ್ದರೂ ನಾಗರೀಕತೆಯ ಗಂಧ ಗಾಳಿ ಇಲ್ಲದಿರುವವನಿರಬಹುದು.** ಅದೇ ರೀತಿ ಒಬ್ಬ ನಾಗರೀಕತೆಯುಳ್ಳವನು ಸುಸಂಸ್ಕೃತನಾಗದಿರಬಹುದು ಅಥವಾ ಒಬ್ಬ ಮನುಷ್ಯ ನಾಗರೀಕನೂ, ಸುಸಂಸ್ಕೃತನಾಗಿಯೂ ಇರಬಹುದು. ಸ್ವಾಮಿ ವಿವೇಕಾನಂದರ ನುಡಿಯಂತೆ ಮಾನವ ಮೀನಿನಂತೆ ನೀರೊಳಗೆ ಹೋಗಲು ಕಲಿತಿದ್ದಾನೆ. ಆಕಾಶದಲ್ಲಿ ಹಕ್ಕಿಯಂತೆ ಹಾರಾಡಲು ಕಲಿತಿದ್ದಾನೆ. ಆದರೆ ಮಾನವನು ಇನ್ನೊಬ್ಬ ಮಾನವನನ್ನು ತಿಳಿದುಕೊಳ್ಳುವುದಕ್ಕೆ ಕಲಿತಿಲ್ಲ. ಅಂದರೆ ಮನುಷ್ಯ ಹಕ್ಕಿಯಂತೆ ಹಾರಾಡಲು, ಮೀನಿನಂತೆ ನೀರಲ್ಲಿ ಹೋಗಲು ನಾಗರೀಕನಾಗಿದ್ದರೂ ಅವನಲ್ಲಿ ಮನುಷ್ಯನನ್ನು ಅರಿಯಲು ಕಲಿಯದಿದ್ದರೆ ಅವನು ಪಡೆದ ನಾಗರೀಕತೆ ಸಂಸ್ಕೃತಿಯನ್ನು ಹೊಂದಿಲ್ಲದ ನಾಗರೀಕತೆಯಾಗಿದೆ. ವಿಜ್ಞಾನ ಪ್ರಾಪಂಚಿಕ ಸುಖಕ್ಕಾಗಿ ಅದೆಷ್ಟೋ ಉಪಕರಣಗಳನ್ನು ಕಂಡು ಹಿಡಿದಿದ್ದಾನೆ. ಚಂದ್ರಲೋಕಕ್ಕೂ ಹೋಗಿ ಬಂದಿದ್ದಾನೆ. ಭೂಮಂಡಲವನ್ನು ಕೆಲವೇ ಗಂಟೆಯೊಳಗೆ ನಾ ಶ ಪೂಡುವ ಶಸ್ತ್ರಾಸ್ತ್ರವನ್ನು ಕಂಡುಹಿಡಿದಿದ್ದಾನೆ. ಅಮೇರಿಕ, ಇಂಗ್ಲೆಂಡ್ ಜರ್ಮನಿ, ಜಪಾನ್ ಮುಂತಾದ ನಾಗರೀಕತೆಯಲ್ಲಿ ಮುಂದುವರಿದ ದೇಶಗಳು ಬಲಹೀನ ದೇಶಗಳ ಮೇಲೆ ತಮ್ಮ ದರ್ಪವನ್ನು ತೋರಿಸುತ್ತಿರುವುದು ಅವುಗಳ ಆಧ್ಯಾತ್ಮಿಕ ಸಂಸ್ಕೃತಿಯ ಕ್ಷೋಭೆಗೆ ಕಾರಣವಾಗಿವೆ.

ಅದೇ ರೀತಿಯಲ್ಲಿ ಒಬ್ಬ ವ್ಯಕ್ತಿ ಬೇಕಾದಷ್ಟು ವಿದ್ಯಾಭ್ಯಾಸ ಮಾಡಿ, ದೊಡ್ಡ ದೊಡ್ಡ ಡಿಗ್ರಿಗಳನ್ನು ಪಡೆದು, ಹೇರಳವಾದ ಐಶ್ವರ್ಯ ಹೊಂದಿದ್ದು ಭವ್ಯವಾದ ಮನೆಯಲ್ಲಿ ವಾಸವಾಗಿ ತಿರುಗಾಡಲು, ತಿನ್ನಲು ಅಲಂಕೃತ ಮನೆ, ಸ್ವರ್ಗೀಯ ಸುಖವನ್ನು ಕೊಡುವ ಪಾನೀಯಗಳಿಂದ ಸುಖಪಟ್ಟು, ಆತ ಮಾನವೀಯ ಸ್ವಭಾವವಿಲ್ಲದೆ ರಾಕ್ಷಸ ಸ್ವಭಾವದವನಾದರೆ ಅವನು ಸಂಸ್ಕೃತಿಯನ್ನು ಹೊಂದಿದವನೆಂದು ಹೇಳಲು ಸಾಧ್ಯವಿಲ್ಲ. ಹಾಗೆಯೇ ಒಬ್ಬ ಜೀವನದಲ್ಲಿ ಸಾಕಷ್ಟು ಸಂಪತ್ತನ್ನು ಕೂಡಿಟ್ಟು ಹೆಂಡತಿ, ಮಕ್ಕಳಿಲ್ಲದೆ ಅನಾಥವಾಗಿ, ಕೂಡಿಟ್ಟ ಹಣವನ್ನು ಅನಾಥವಾಗಿರಿಸಿ, ಶವಾಗಾರದಲ್ಲಿ ಅನಾಥವಾಗಿ ಚಿರನಿದ್ರೆಗೈದು ತಾನು ತಿನ್ನದೆ ಪರರಿಗೂ, ಸಮಾಜಕ್ಕೂ ಏನನ್ನು ಬಯಸದೆ, ತಾನು ಕೂಡಿಟ್ಟ ಸಂಪತ್ತೆಲ್ಲಾ ನರಿ ನಾಯಿ ತಿನ್ನುವ ಹಾಗೆ ಮಾಡಿ ಪರಲೋಕವಾಸಿಯಾಗುವ ಮನುಷ್ಯರನ್ನು ನಾಗರೀಕನೆಂದು ಹೇಳಲು ಸಾಧ್ಯವಿಲ್ಲ. ಈಗಿನ ಯುವಕ ಯುವತಿಯರು ಪಾಶ್ಚಾತ್ಯ ನಾಗರೀಕತೆಯ ವ್ಯಾಮೋಹದಿಂದ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯನ್ನು ಬದಿಗೊತ್ತಿ ಇಲ್ಲಿನ ಜನರ ಆಚಾರ–ವಿಚಾರಗಳು, ಗೊಡ್ಡು ಸಂಪ್ರದಾಯವೆಂದು ಭಾವಿಸಿ ನಮ್ಮ ಸಂಸ್ಕೃತಿಯನ್ನು ತುಚ್ಛವಾಗಿ ಕಾಣುತ್ತಿದ್ದಾರೆ. ನಮ್ಮನ್ನು ಬ್ರಿಟೀಷರು 300 ವರ್ಷಗಳ ಕಾಲ ರಾಜ್ಯವಾಳಿದಾಗ ನಮ್ಮವರು ಅವರ ಅಧಿಕಾರ ದರ್ಪಕ್ಕಾಗಿ, ಆಂಗ್ಲರ ಉಡುಪು ಅವರ ಆಹಾರ ಮುಂತಾದವುಗಳನ್ನು ಅನುಕರಣೆ ಮಾಡಿದರೂ, ಸ್ವಾತಂತ್ರ್ಯ ಬಂದು 50 ವರ್ಷಗಳಾದ ಮೇಲೂ ಪಾಶ್ಚಾತ್ಯ ನಾಗರೀಕತೆಯ ಸೋಂಕನ್ನು ನಿವಾರಿಸುವ ಬದಲು ಹೆಚ್ಚು ಹೆಚ್ಚಾಗಿ ಅನುಕರಣೆ ಮಾಡುವ ಪರಿಪಾಠವಾಗಿ, ಆ ಕಡೆ ಭಾರತೀಯರೂ ಅಲ್ಲದೆ ಈ ಕಡೆ ಪಾಶ್ಚಾತ್ಯರೂ ಅಲ್ಲದೆ ನೀರಿನಿಂದ ಭೂಮಿಯ ಮೇಲೆ ಬಂದ ಮೀನಿನ ಗತಿಯಾಗುವ ಭಯ ಸಂಗಾತಿಗೆ ಆಗುತ್ತಿದೆ. ಇದನ್ನು ಸಮಾಜದ ಧುರೀಣರು ಅರಿತು ಮುಂದಿನ ಪೀಳಿಗೆ ಈ ರೀತಿಯ ಸಂಕಟಕ್ಕೆ ಸಿಕ್ಕದಂತೆ ತಮ್ಮ ಮಕ್ಕಳು ಚಿಕ್ಕವರಾಗಿದ್ದಾಗಲೇ ನಮ್ಮ ಸಂಸ್ಕೃತಿಯ ಮಹತ್ವವನ್ನು ಬಿಡಿಸಿ ತಿಳಿಹೇಳಿ ಕೊಟ್ಟು ನಮ್ಮ ಹಿರಿಯರು 7000 ವರ್ಷಗಳಿಂದ ಕಾಪಾಡಿಕೊಂಡು ಬಂದ ನಮ್ಮ ಸಂಸ್ಕೃತಿಯ ಉಳಿಯುವಿಕೆಗೆ ಪ್ರಯತ್ನಿಸುವರೆ ಎಂಬ ಪ್ರಶ್ನೆಯನ್ನು ಸಂಗಾತಿ ಕಳಕಳಿಯಿಂದ ಕೇಳುತ್ತಿದೆ ಇಂದು. ○

## ಭಾಷಾ ಸಾಮಿಪ್ಯ

| ಕನ್ನಡ | ಅರೆಭಾಷೆ | ಹವ್ಯಕಭಾಷೆ |
|---|---|---|
| ಬಂದ | ಬಾತ್ | ಬೈಂದ |
| ಹೋಗುತ್ತೇನೆ | ಹೋನೆ | ಹೋವುತ್ತೆ |
| ಆಗುವುದಿಲ್ಲ | ಆದುಲೆ | ಆವುತ್ತಿಲ್ಲೆ |
| ಇಲ್ಲ | ಇಲ್ಲೆ | ಇಲ್ಲೆ |
| ಬೇಡಂತೆ | ಬೇಡಗಡ | ಬೇಡಡ |
| ಇಲ್ಲಂತೆ | ಇಲ್ಲೆಗಡ | ಇಲ್ಲೆಡ |
| ಉಂಟು | ಉಟ್ಟು | ಇದ್ದು |
| ಅಮ್ಮ | ಅವ್ವ | ಅಬ್ಬೆ |
| ಮಾಡಬೇಕು | ಮಾಡೊಕು | ಮಾಡೆಕ್ಕು |
| ಬರುತ್ತೇನೆ | ಬನ್ನೆ | ಬತ್ತೆ |
| ಹುಡುಗಿ | ಗೂಡೆ | ಕೂಸು |

# ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 17 ರಂದು ಜಗನ್ಮಾತೆ ಆದಿ ಶ್ರೀ ಕಾವೇರಿಯ ತೀರ್ಥೋದ್ಭವ



ಕೊಡಗಿನ ಬ್ರಹ್ಮಗಿರಿಯ ತಲಕಾವೇರಿಯ ಮಡಿಲಲ್ಲಿ ಅಕ್ಟೋಬರ್ 17ರ ಮಧ್ಯರಾತ್ರಿ 12·35 ಗಂಟೆಗೆ ಸರಿಯಾಗಿ ಕರ್ಕಾಟಕ ಲಗ್ನದಲ್ಲಿ ಪವಿತ್ರಮಾತೆಯು, ದೇಶೋದ್ಧಾರಕಳು, ಕವೇರಮುನಿ ದಂಪತಿಗಳ ದತ್ತು ಪುತ್ರಿಯೂ ಆದ ಲೋಪಮುದ್ರೆ, ಜಗನ್ಮಾತೆ ಶ್ರೀ ಕಾವೇರಿ ತಾಯಿಯು, ದಕ್ಷಿಣಾಚಲದಿಂದ ವರ್ಷ ಪ್ರತಿ ಸುಮಾರು 2 ಲಕ್ಷಕ್ಕೂ ಮಿಕ್ಕಿ ಸ್ತ್ರೀ ಪುರುಷ, ಮಕ್ಕಳಾದಿಯಾಗಿ ಆಗಮಿಸುವ ಭಕ್ತವೃಂದಕ್ಕೆ ತೀರ್ಥ ಸ್ವರೂಪಿಣಿಯಾಗಿ ಕಾಣಿಸಿಕೊಳ್ಳಲಿದ್ದಾಳೆ.

ತುಲಾಸಂಕ್ರಮಣದಂದು ಕಾವೇರಿತಾಯಿಯು ದಕ್ಷಿಣಾಂಚಲದ ಕಾವೇರಿ ಬಯಲಿನ ಕೋಟಿ ಭಕ್ತವೃಂದವನ್ನು ಆಹ್ವಾನಿಸಿ, ತಾನು ಪೂಜಿಸಲ್ಪಡುವುದು ವಾಡಿಕೆ. ಕೊಡಗಿನ ಜನತೆ ಆದರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಶ್ರೀ ಕಾವೇರಿ ಸನ್ನಿಧಿಯಲ್ಲಿ ವಾಸವಾಗಿ ನೆಲೆ ನಿಂತಿರುವ ಪ್ರತಿಯೋರ್ವರು ಮಡಿ ಭಕ್ತಿಯಲ್ಲಿ ತಾಯಿಯನ್ನು ಪೂಜೆಗೈಯ್ಯುವುದರಿಂದ ತಮ್ಮ ಇಷ್ಟಾರ್ಥ ಸಿದ್ಧಿಸುವುದರಲ್ಲಿ ಯಾವುದೇ ಅನುಮಾನವಿಲ್ಲವೆನ್ನುವುದು ಸಹ ಪುರಾಣ ಪ್ರಸಿದ್ಧವಾಗಿದೆ. ಹಾಗೆಯೇ ಜೀವನದಲ್ಲಿ ಒಮ್ಮೆಯಾದರೂ ದಂಪತಿಗಳಾಗಿ ಭೇಟಿಕೊಟ್ಟು ತಾಯಿಯ ಕೃಪೆಗೆ ಪಾತ್ರರಾಗುವುದು ಸಹ ಅಮೂಲ್ಯವಾಗಿದೆ.

**ಕಾವೇರಿಯ ಕಿರುಪರಿಚಯ :**

ಕಾವೇರಿಯ ಉಗಮ ಸ್ಥಾನದ ಕುಂಡಿಕೆಯಲ್ಲಿ ಸೂರ್ಯದೇವನು ತುಲಾ ರಾಶಿಗೆ ಪ್ರವೇಶಿಸುವ ಪುಣ್ಯ ಕಾಲದಲ್ಲಿ ಕಾವೇರಿ ಮತ್ತು ಗಂಗೆಯರ ಸಮಾಗಮವೇ ಈ ತೀರ್ಥೋದ್ಭವ ದಿನ. ಈ ತೀರ್ಥೋದ್ಭವ ದಿನ ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವ ಸಮಯದಲ್ಲಿ, ಕುಂಡಿಕಾ ತೀರ್ಥಸ್ನಾನವನ್ನು ವಿಧ್ಯುಕ್ತವಾಗಿ ಮಾಡುವುದರಿಂದ ಅಶ್ವಮೇಧದ ಫಲವೂ, ಸರ್ವ ಪಾಪಪುಂಜ ಪರಿಹರಿಸುವಿಕೆಯೂ, ಮನುಜ ಕುಲವು ಗಂಗಾ ಯಮುನಾ ಸಂಗಮದಲ್ಲಿ ಹೊಂದುವ ಫಲಕ್ಕಿಂತ ಕೋಟಿ ಪಾಲು ಸಿಗುವುದೆಂದು ಮತ್ತು ಪಾಪಮುಕ್ತರನ್ನಾಗಿಯೂ, ಮೋಕ್ಷಕ್ಕೆಡೆ ಮಾಡಿಕೊಡುವುದೆಂದು, ಸರ್ವಸನ್ಮಂಗಳವನ್ನುಂಟು ಮಾಡುತ್ತಾಳೆಂಬ ಗಾಢ ನಂಬಿಕೆ ಸರ್ವ ಶ್ರೇಷ್ಠವಾಗಿರುತ್ತದೆ.

ವಿಷ್ಣುವಿನಿಂದ ಅವತರಿಸಿ, ಲಕ್ಷ್ಮೀದೇವಿಯ ಅಂಶದಿಂದ ಹುಟ್ಟಿದವಳಾಗಿ, ಸೃಷ್ಟಿಕರ್ತ ಚತುರ್ಮುಖ ಬ್ರಹ್ಮನ ದತ್ತು ಪುತ್ರಿಯಾಗಿ ತ್ರಿಲೋಕಸುಂದರಿಯೂ ಆದವಳು, ತನ್ನ ಅಪ್ರತಿಮ ಸೌಂದರ್ಯಕ್ಕೆ ತನಗೆ ತಾನೇ ಅಸೂಯೆಪಟ್ಟುಕೊಳ್ಳುತ್ತಾ, ಕಿಶೋರಿ ಲೋಪಾಮುದ್ರೆಯು ಬೆಳೆಯುತ್ತಾಳೆ. ಇಂದಿಗೂ ಕಾವೇರಿ ಮೂರ್ತಿ ಬಹಳ ಕಮ್ಮಿಯೇ ಸರಿ. ಅವಳ ಚೆಲುವ ಭವ್ಯ ಮೂರ್ತಿ ಇಂದು ಎಲ್ಲೂ ಇಲ್ಲವಾಗಿದೆ. ಸುಂದರಿ ಕಾವೇರಿಯಂತೆಯೇ ಕೊಡಗಿನ ವನಿತೆಯರು ಸಹ ಚಲುವೆಯರಾಗಿರುವುದೊಂದು ವಿಶೇಷವಾಗಿದೆ.

ಬ್ರಹ್ಮಾಂಡ ಬ್ರಹ್ಮಗಿರಿ ತಪ್ಪಲಿನಲ್ಲಿ ಕುವೇರ ರಾಜಮುನಿ ದಂಪತಿಗಳು ಸಂತಾನ ಭಾಗ್ಯಕ್ಕಾಗಿ ಕಠೋರ ತಪಸ್ಸನ್ನು ಆಚರಿಸುತ್ತಿರಲು, ಇವರ ಪರಮ ಭಕ್ತಿಗೆ ಮೆಚ್ಚಿದ ಪರಬ್ರಹ್ಮನು ತನ್ನ ದತ್ತು ಪುತ್ರಿಯಾದ ಲೋಪಾಮುದ್ರೆಯನ್ನು ಲೋಕ ಕಲ್ಯಾಣಕಾರಿಣಿಯಾಗೆಂದು ಹರಿಸಿ ಅನುಗ್ರಹಿಸುತ್ತಾರೆ. ಅಂದಿನಿಂದ ಕುವೇರ ರಾಜಮುನಿಯ ಮಗಳಾಗಿ 'ಕಾವೇರಿ'ಯಾಗುತ್ತಾಳೆ. ದಿನಗಳು ಉರುಳುತ್ತಾ ಇರಲು ಸುಂದರ ಮಗಳ ಲಾಲನೆ, ಪಾಲನೆಯಲ್ಲಿರಲು, ಈ ರಾಜಮುನಿ ದಂಪತಿಗಳು ದೇಹತ್ಯಾಗಮಾಡಿ ಮುಕ್ತಿಯನ್ನು ಹೊಂದುತ್ತಾರೆ.

ಅಂತೆಯೇ ಅನಾಥೆಯಾದ ಕಾವೇರಿ, ಋಷಿಮುನಿಗಳ ಸೇವೆಯನ್ನು ಮಾಡುತ್ತಾ ಆಶ್ರಮವಾಸಿಯಾಗುತ್ತಾಳೆ. ಲೋಕ ಸಂಚಾರಾರ್ಥವಾಗಿ ಆಗಮಿಸಿದ ಅಗಸ್ತ್ಯ ಋಷಿಗಳ ಇಚ್ಛೆಗೆ ಒಲಿದು ಜೀವನ ಪರ್ಯಂತ ತನ್ನನ್ನು ಒಂದು ಕ್ಷಣವೂ ಬಿಟ್ಟಿರದೆ ತನ್ನೊಡನೆಯೇ ಬಾಳಬೇಕೆನ್ನುವ ವಚನವನ್ನು ಪಡೆದು ಮಹಾತಪಸ್ವಿಗಳ ಸಹಧರ್ಮಿಣಿಯಾಗುತ್ತಾಳೆ ಕಾವೇರಿ.

ಹೀಗಿರಲು ಒಮ್ಮೆ, ಅಗಸ್ತ್ಯರು ತನ್ನ ಪತ್ನಿ ಕಾವೇರಿಯನ್ನು ಜಲ ರೂಪವಾಗಿ ಪರಿವರ್ತಿಸಿ, ಅದನ್ನು ತನ್ನ ಕಮಂಡಲದಲ್ಲಿರಿಸಿ, ಪಕ್ಕದ ಕನ್ನಿಕೆಯ ಬಳಿ ಸ್ನಾನಕೆಂದು ತೆರಳುತ್ತಾರೆ. ತನ್ನ ಪತಿಯ ವಚನಭಂಗಕ್ಕೆ ಅಸಂತುಷ್ಟಳಾದ ಪರಮಸುಂದರಿ ಕಾವೇರಿ ತನ್ನ ಪಿತೃವಿನ ಇಚ್ಛೆಯಂತೆ ಜೀವಕೋಟಿಯ ಉದ್ಧರಕ್ಕಾಗಿ, ಶಾಶ್ವತ ಜಲರೂಪವನ್ನು ತಳೆದು, ನದಿಯಾಗಿ ಹರಿದು, ತನ್ನ ಸಂಗಾತಿಯರಾದ, ಕನ್ನಿಕೆ ಮತ್ತು ಸುಜ್ಯೋತಿಯವರೊಡಗೂಡಿ ಮೇಘ ಪರ್ವತದಿಂದ ಇಳಿದು, ಹಸಿರಿನ ಚಲುವೆಯಾಗಿ, ಪವನ ಶಕ್ತಿಯ ಅಮೋಘ ಧಾರೆಯಾಗಿ, ತನ್ನ ಪ್ರತಿಯೊಂದು ಕ್ಷಣದ ಬಿಂದುವನ್ನು ಕೋಟಿ ಕೋಟಿ

ಜೀವರಾಶಿಗಳ ಪಾಲಿಗೆ ಚೈತನ್ಯಮಯವಾಗಿರಿಸುತ್ತಾ, ಸದಾ ಸದ್ಭಾವನೆ ಪರೋಪಕಾರಿಣಿಯಾಗಿ, ಅಂದಿನಿಂದ ಈ ಧರೆಯೊಳಗೆ ನಿರಂತರವಾಗಿ ಹರಿಯತೊಡಗಿದಳು, ಪರಮಪಾವನೆಯು ಲೋಕೋದ್ಧಾರಕಳೂ ಆದ ಮಾತೆ ಶ್ರೀ ಕಾವೇರಿ.

ಕಾವೇರಿ ಮೊದಲು ಬ್ರಹ್ಮಗಿರಿ, ಕುಂಡಿಕೆ, ತಲಕಾವೇರಿ, ನಾಗತೀರ್ಥ ಕ್ಷೇತ್ರ, ಭಗಂಡ ಕ್ಷೇತ್ರ, ಭಾಗಮಂಡಲದ ತ್ರಿವೇಣಿ ಸಂಗಮ, ಹರಿಶ್ಚಂದ್ರ, ಬಲಮುರಿ, ಗುಹ್ಯ, ರಾಮ ಸ್ವಾಮಿ ಕಣಿವೆ, ರಾಮನಾಥಪುರ, ಸಾಲಿಗ್ರಾಮ, ಚುಂಚನ ಕಟ್ಟೆ, ಕಪ್ಪಡಿ ಕ್ಷೇತ್ರ, ಎಡತೊರೆ, 2ನೇ ಬಲಮುರಿ, ಶ್ರೀನಿವಾಸ ಕ್ಷೇತ್ರ, ರಂಗನತಿಟ್ಟು, ಪಶ್ಚಿಮವಾಹಿನಿ, ಶ್ರೀರಂಗಪಟ್ಟಣ, ಕರಿಘಟ್ಟ, ಮಹದೇವಪುರ, ಸೋಮನಾಥಪುರ, ತಿರುಮಕೂಡಲು ನರಸೀಪುರ, ಮುಡಕತೊರೆ, ತಲಕಾಡು, ಸತ್ಯಗಾಲ, ಗವಿರಾಯನಬೆಟ್ಟ, ಶಿವನಸಮುದ್ರ, ಸಂಗಮ, ಮೇಕೆದಾಟು, ಹೊಗೆನಕಲ್ ಕರ್ನಾಟಕದಲ್ಲಿಯೂ ಮತ್ತು ಮೆಟ್ಟೂರು, ಭವಾನಿ, ಈರೋಡು, ಕ್ಯಾಂಗ್ಯನ್ ಪಾಳ್ಯಮ್, ಉಂಜಲೂರು, ಕೊಡುಮುಡಿ, ನಿರೂರು, ತಿರುಮಕೂಡಲು, ಕಟ್ಟಳೈ, ರಾಮ ಸಮುದ್ರಮ್, ಸತ್ಯಮ್, ತಿರುನಾರಾಯಣಪುರಮ್, ತಿರು ಈಂಗೋಮಲೈ, ಕರುಪತ್ತೂರು, ಕುಳಿತಲೈ, ತಿರುಪ್ಪ ರ್‍ಯಾತುರೈ ಮುಕ್ಕೊಂ, ಶ್ರಿರಂಗಂ, ತಿರುವಾನೈಕ್ಕಾವಲ್, ತಿರುಚಿನಪಳ್ಳಿ, ಕೃಷ್ಣರಾಯಪುರಂ, ಕಲ್ಲಣೆ, ತಿರುವೈಯಾರ್, ತಂಜಾವೂರ್, ಪಾಪನಾಶನಮ್, ಸ್ವಾಮಿಮಲೈ, ಗೋವಿಂದಪುರ, ಧರ್ಮಾಪುರಮ್, ಛಾಯಾವನಮ್, ಪೊಂಪುಹಾರ್, ಹೀಗೆ ತಮಿಳು ನಾಡಿನಲ್ಲಿಯೂ ಹರಿದು ಈ ಎಲ್ಲಾ ಕ್ಷೇತ್ರಗಳನ್ನು ಪಾವನವನ್ನಾಗಿಸಿ, ಕೋಟ್ಯಾಂತರ ಭಕ್ತವೃಂದದವರನ್ನು ತನ್ನ ಮಡಿಲಲ್ಲಿ ಪಡೆದು, ಅಲ್ಲಲ್ಲಿ ತನ್ನ ಹರಿವಿನ ಗಾತ್ರ–ಪಾತ್ರವನ್ನು ವಿಸ್ತರಿಸಿ ಕೊಳ್ಳುತ್ತಾ, ಸಂಕುಚಿತಗೊಳ್ಳುತ್ತಾ, ಸುಮಾರು 770ಕಿ.ಮೀ. ಗಳನ್ನು ಕ್ರಮಿಸಿ, ಕಟ್ಟಕಡೆಗೆ ತಾನು ಜನಿಸಿದ ಗಾತ್ರದಷ್ಟೇ ಬಂಗಾಳ ಕೊಲ್ಲಿಯಲ್ಲಿ ಲೀನವಾಗುವಳು ಪೂಜ್ಯ ಮಾತೆ ಶ್ರೀ ಕಾವೇರಿ.

—ಪಟ್ಟಡ ಪ್ರಭಾಕರ್.

## ಅರಸೊತ್ತಿಗೆಯಿಂದ ವಂಚಿತರಾದ ಶ್ರೀಕಂಠದತ್ತ ನರಸಿಂಹರಾಜ ಒಡೆಯರು

ವಿಶ್ವವಿಖ್ಯಾತ ದಸರಾ ಮಹೋತ್ಸವದ ಮುನ್ನವೇ ಅರಸನಿಗೆ ಸಲ್ಲುತ್ತಿದ್ದ ಅರಸೊತ್ತಿಗೆ ಸರ್ಕಾರದ ಪಾಲಾಗುತ್ತಿದೆ. ದಸರಾ ಮಹೋತ್ಸವದಲ್ಲಿ ಪಾಲ್ಗೊಳ್ಳಲು ಯುವರಾಜ ಶ್ರೀಕಂಠ ದತ್ತ ನರಸಿಂಹರಾಜ ಒಡೆಯರವರು ನಿರಾಕರಿಸಿರುವ ಹಿನ್ನೆಲೆಯಲ್ಲಿಯೇ ರಾಷ್ಟ್ರಪತಿಯವರಿಂದ ವಿಧೇಯಕಕ್ಕೆ ಈ ಅಂಗೀಕಾರದ ಮುದ್ರೆ ಬಿದ್ದಿದೆ. ಇದು ಅರಸ ವಂಶಜರಿಗೆ ತೀವ್ರ ಹಿನ್ನಡೆಯನ್ನುಂಟು ಮಾಡಿದೆ.

ಅರಮನೆ ಸ್ವಾಧೀನ ವಿಧೇಯಕವು ಅರಮನೆಯನ್ನಲ್ಲದೆ, ಅದಕ್ಕೆ ಸಂಬಂಧಿಸಿದ ಇತರ ಕಟ್ಟಡಗಳು, ದೇವಾಲಯಗಳು, ಪೂಜಾಸ್ಥಳಗಳು, ರಾಜಲಾಂಛನಗಳು, ಕಲಾ ಪರಿಕರಗಳು, ಶಿಲ್ಪ, ಚಿತ್ರ, ಪೀಠೋಪಕರಣ ಇತ್ಯಾದಿ ಚರ ಮತ್ತು ಸ್ಥಿರಾಸ್ತಿಗಳನ್ನು ಒಳಗೊಂಡಿರುತ್ತದೆ ಎಂದು ತಿಳಿಸಿದ ಅವರು ಅರಮನೆಯಲ್ಲಿ ಲಭ್ಯವಿರುವ ಎಲ್ಲ ವಸ್ತುಗಳು ಸರ್ಕಾರದ ಪಾಲಾಗಿದೆ. ಈ ಸಂದರ್ಭದಲ್ಲಿ 32 ಕೋಟಿ ರೂ.ಗಳನ್ನು ನೀಡಲು ಸರ್ಕಾರ ನಿರ್ಧರಿಸಿದ್ದು ಒಡೆಯರು ಮತ್ತು ಅವರ ಪತ್ನಿ ಪ್ರಮೋದಾದೇವಿ ಒಡೆಯರು ವಾಸಿಸಲು ಅವರು ಈಗಿರುವ ಮನೆಯನ್ನು ಬಿಟ್ಟು ಕೊಡಲು ನಿರ್ಧರಿಸಲಾಗಿದೆ. ಒಡೆಯರು ಅರಮನೆಯನ್ನು ಖಾಲಿ ಮಾಡಿ ಹೋಗುವುದಾದರೆ ಅವರಿಗೆ ಮೈಸೂರು ನಗರದಲ್ಲಿ ಒಂದು ಎಕರೆ ಭೂಮಿ ಹಾಗೂ ಒಂದು ಕೋಟಿ ರೂಪಾಯಿಗಳನ್ನು ನೀಡಲು ಸರ್ಕಾರ ತೀರ್ಮಾನಿಸಿದೆ. ಈಗ ಅರಮನೆಯೊಳಗಿನ ಖಾಸಗಿ ದರ್ಬಾರಿನ ಸಂಪ್ರದಾಯ, ಆಡಂಬರ ಮತ್ತು ವೈಭವದ ಪರಂಪರೆ ಒಡೆಯರ ಕುಟುಂಬದಿಂದ ಕಣ್ಮರೆ ಆಗುವ ದಿನ ಹತ್ತಿರ ಬಂದಿದೆ.

ಸರಕಾರ ಅರಮನೆ ವಶಪಡಿಸಿಕೊಂಡ ಮೇಲೆ ಬಹಳಷ್ಟು ವಸ್ತುಗಳ ಹಿಡಿತ ಒಡೆಯರ ಕಣ್ಣು ಮುಂದೆಯೇ ಅವರ ಕೈ ಬಿಟ್ಟು ಹೋಗಲಿದೆ. ಮುಂದೆ ಸಿಂಹಾಸನ, ಆಭರಣಗಳ ಉಪಯೋಗಕ್ಕೆ ಸ್ವತಃ ಒಡೆಯರವರೇ ಸರಕಾರಕ್ಕೆ ಅರ್ಜಿ ಕೊಟ್ಟು ಪಡೆಯಬೇಕಾದ ದಿನಗಳೂ ಬರಬಹುದು ಅಲ್ಲವೇ?

ಕೃಷ್ಣರಾಜ ಒಡೆಯರ ಕಾಲದಿಂದ ಜಯಚಾಮರಾಜ ಒಡೆಯರ ಕಾಲದವರೆಗೆ ಅರಮನೆಯಲ್ಲಿ ನವರಾತ್ರಿ ಆಚರಣೆಯನ್ನು ವಿಜಯದ ಸಂಕೇತವಾಗಿ ಆಚರಿಸುತ್ತಿದ್ದರು. ರಾಜಧನ ರದ್ದುಗೊಂಡಾಗ ಚುನಾಯಿತ ಸರ್ಕಾರ 'ರಾಜ ಮನೆತನ'ದ ಮೇಲೆ ಇಟ್ಟಿದ್ದ ಗೌರವದಿಂದ ದಸರಾ ಆಚರಣೆ ತೊಡಕಿಲ್ಲದೆ ನಡೆಯುತ್ತಾ ಬಂತು ಎಂಬುದು ಎಲ್ಲರಿಗೂ ತಿಳಿದಿದೆ. ಮಹಾರಾಜರು ಅಂಬಾರಿ ಮೇಲೆ ಜಂಬೂಸವಾರಿ ಹೋಗುವ ದಸರಾವನ್ನು ನಿಲ್ಲಿಸಿದಾಗ ಜನ ಹಿಂದಿನ ವೈಭವವನ್ನು ವೀಕ್ಷಿಸಲಾಗದೆ ಚಡಪಡಿಸುತ್ತಿದ್ದರು. ನಂತರ ಚಿನ್ನದ ಅಂಬಾರಿಯಲ್ಲಿ ಮೈಸೂರು ಜನತೆಯ ಆದಿದೇವತೆ ಚಾಮುಂಡೇಶ್ವರಿ ಮೆರವಣಿಗೆ ಆಕರ್ಷಣೆಯಾಯಿತು. ಇದು ಸರ್ಕಾರಿ ವ್ಯವಸ್ಥೆಯಾದರೆ, ಅರಮನೆ ಅಂತರಂಗ ವಾಸದಲ್ಲಿ ಪ್ರತಿಷ್ಠಾಪಿಸಲಾಗಿರುವ ಚಾಮುಂಡೇಶ್ವರಿಗೆ ವಿಶೇಷ ಪೂಜೆ ಸಲ್ಲಿಸಿ ನವರಾತ್ರಿ ಉತ್ಸವವನ್ನು ಅರಸರು ರಾಜದಿರಿಸಿಯಲ್ಲಿ ಹತ್ತು ದಿನ ದರ್ಬಾರ್

# ದಿ|| ಮುದ್ದಪ್ಪನವರ ಸುಪುತ್ರ ಐವರ್ನಾಡಿನ 'ಅಣ್ಣ' ಎನ್. ಎಂ. ಬಾಲಕೃಷ್ಣ

ಲೇಖಕ : **ಸುಬ್ರಾಯ ಚೊಕ್ಕಾಡಿ**

[ಕಳೆದ ಸಂಚಿಕೆಯಿಂದ]

ಅಗಲವಾದ ಮುಖ, ಮುಖದಲ್ಲಿ ಎದ್ದು ಕಾಣುವ ದಪ್ಪ ಮೀಸೆ, ಚಿಕ್ಕ ಕ್ರಾಪು, ಎತ್ತರವೂ ಅಲ್ಲದ, ಕುಳ್ಳೂ ಅಲ್ಲದ, ಮಿಲಿಟರಿಗೆಂದೇ ಹೇಳಿ ಮಾಡಿಸಿದಂತಿರುವ ಗಟ್ಟಿ ಮುಟ್ಟಾದ ಶರೀರ, ಪೈಪೋ, ಸಿಗರೇಟೋ ಸೇದುತ್ತಾ, ಸುತ್ತಲಿನ ಜನರನ್ನೆಲ್ಲ ತನ್ನ ಪ್ರಭಾವ ವಲಯದಲ್ಲಿ ಸಿಲುಕಿಸುತ್ತಾ ಮಾತಾಡುವಾಗಿನ ಗತ್ತು ಗಾಂಭೀರ್ಯ...

ಇವರು ಎನ್ನೆಂ ಐವರ್ನಾಡಿನ 'ಅಣ್ಣ' ಎಂದೇ ಖ್ಯಾತರಾದ ಎನ್. ಎಂ. ಬಾಲಕೃಷ್ಣ. ಐವರ್ನಾಡಿನ ಸೆನಪು ಬಂದಾಗಲೆಲ್ಲ ನನ್ನ ಕಣ್ಣ ಮುಂದೆ ಕಾಣಿಸಿಕೊಳ್ಳುವುದು ಬಾಲಕೃಷ್ಣರ ಈ ಚಿತ್ರವೇ. ಸುಮಾರು ಹತ್ತು ವರ್ಷಗಳ ಅವಧಿ ಅವರ ವೈಭವ ಹೇಗೋ ಹಾಗೆ ಅವರ ಕಷ್ಟದ ದಿನಗಳನ್ನೂ ಸಮೀಪದಿಂದ ಕಂಡವನು ನಾನು. ಅವರ ಪ್ರೀತಿ, ಸಿಟ್ಟು, ಗತ್ತು, ಗಾಂಭೀರ್ಯ, ತ್ಯಾಗ, ಸೋಲು, ಗೆಲುವುಗಳನ್ನೆಲ್ಲಾ ಹತ್ತಿರದಿಂದ ಕಂಡು, ಆ ಮೂಲಕ ಅವರ ಒಳ ಬಾಳಿನ ಸತ್ವವನ್ನು ಅರ್ಥಮಾಡಿಕೊಂಡು, ಅವರ ಬಗ್ಗೆ ಅಪಾರ ಗೌರವವನ್ನು ಬೆಳೆಸಿಕೊಂಡವನು ನಾನು.

1959ರ ಆಗಸ್ಟ್‌ನಲ್ಲಿ ನಾನು ಐವರ್ನಾಂಡಿನ ದೇವರ್ಕಾನ ಎಂಬಲ್ಲಿಗೆ ಅಧ್ಯಾಪಕನಾಗಿ ನೇಮಕಗೊಂಡು ಶಾಲೆ ತೆರೆಯಬೇಕಾದ ಜವಾಬ್ದಾರಿ ಹೊತ್ತು ಅಲ್ಲಿಗೆ ಹೋದಾಗ ಏನು ಮಾಡಬೇಕು, ಹೇಗೆ ಮುಂದುವರಿಯಬೇಕೆಂದು ತಿಳಿಯದೆ ಗೊಂದಲದಲ್ಲಿ ಸಿಲುಕಿದ ಅನುಭವಿ ಎಳೆಯನಾಗಿದ್ದೆ. ನನ್ನ ಅತಂತ್ರ ಸ್ಥಿತಿಗೆ ಪರಿಹಾರವಾಗಿ ಯಾರೋ ಬಾಲಕೃಷ್ಣರ ಹೆಸರನ್ನು ಸೂಚಿಸಿದರು. ಪ್ರವಾಹದಲ್ಲಿ ಸಿಲುಕಿದವನು ಹುಲ್ಲಿನ ಕಡ್ಡಿಯನ್ನು ಆಸರೆಯಾಗಿ ಹಿಡಿದುಕೊಳ್ಳುವ ಹಾಗೆ, ಬಾಲಕೃಷ್ಣರ ನಾಮ ಜಪಿಸುತ್ತಾ ಅವರ ಮನೆಯೆದುರು ನಿಂತಾಗ ನನ್ನನ್ನು ಸ್ವಾಗತಿಸಿದ್ದು ಆಳೆತ್ತರದ ಆಲ್ಸೇಶನ್ ನಾಯಿಗಳ ಬೊಗಳು, ಇನ್ನೇನು ನನ್ನ ಕತೆ ಮುಗಿದೇ ಹೋಯಿತು, ಯಾಕಾದರೂ ಇಲ್ಲಿಗೆ ಬಂದೆನೋ ಎಂದು ಸಂಕೋಚ, ಭಯ, ಮುಜುಗರಗಳಿಂದ ಮುದ್ದೆಯಾಗಿ ಒಂದು ಮೂಲೆಯಲ್ಲಿ ನಿಂತಿದ್ದ ನನ್ನ ಕಿವಿಗೆ ಬಿದ್ದದ್ದು, 'ಬನ್ನಿ, ನಾಯಿ ಏನೂ ಮಾಡೋದಿಲ್ಲ. ಬನ್ನಿ ಒಳಗೆ' ಎನ್ನುವ ಸ್ನೇಹಭರಿತ ಬೆಚ್ಚನೆಯ ಭರವಸೆ ನೀಡುವಂತಹ ಎನ್ನೆಂ ಅವರ ಮಾತುಗಳು. ಅಂತೂ ಒಳಹೋಗಿ, ಅವರ ಬೈಠಕ್ ಖಾನೆಯ ವೈಭವಕ್ಕೆ ಇನ್ನಷ್ಟು ಕುಗ್ಗಿ, ಅವರು ತೋರಿಸಿದ ಕುರ್ಚಿಯೊಂದರಲ್ಲಿ ಮುದುಡಿ ಕುಳಿತು, ಬಂದ ಕಾರಣವನ್ನು ಕುಗ್ಗಿದ ಸ್ವರದಲ್ಲೇ ಬಿತ್ತರಿಸಿದಾಗ, ನಿರಾಳ ನಗೆಯೊಂದಿಗೆ ಅವರು ತಕ್ಷಣ ಹೇಳಿದ್ದಿಷ್ಟು 'ಅಯ್ಯೋ ಮೇಸ್ಟ್ರೇ, ಅಷ್ಟನ್ನು ಹೇಳೋದಕ್ಕೆ ಯಾಕಿಷ್ಟು ಸಂಕೋಚ ಪಡ್ತೀರಿ, ನಿಮಗೆ ಏನು ಸಹಾಯ ಬೇಕು ಹೇಳಿ–ಬೆಂಚೋ ಮೇಜೊ, ಕುರ್ಚಿಯೋ, ಇಲ್ಲಿದ್ದವುಗಳಲ್ಲಿ ನಿಮಗೆ ಬೇಕಾದ್ದನ್ನು ಕೊಂಡು ಹೋಗಿ. ಆಮೇಲೇನಾದರೂ ಬೇಕಿದ್ದರೆ [ಅಂದರೆ ಆರ್ಥಿಕ ಸಹಾಯ ಎನ್ನುವ ಅರ್ಥದಲ್ಲಿ] ಸಂಕೋಚ ಪಡದೆ ಕೇಳಿ. ಪರ ಊರಿಂದ ಬಂದವರಿಗೆ ನಮ್ಮೂರಲ್ಲಿ ಎಂದಿಗೂ ಕಷ್ಟವಾಗಬಾರದು.

ಇದು ಎನ್ನೆಂ ಅವರ ನೀತಿ. ಇದು ಅವರ ಕೊನೆಗಾಲದವರೆಗೂ ಅತ್ಯಂತ ಕಷ್ಟದ ದಿನಗಳಲ್ಲೂ ಅವರು ನಡೆದುಕೊಂಡ, ಇತರರನ್ನು ನೋಡಿಕೊಂಡ ರೀತಿ! ಕ್ಷಣ ಮಾತ್ರದಲ್ಲಿ ನನ್ನ ಭಯ, ಸಂಕೋಚಗಳನ್ನು ದೂರ ಅಟ್ಟಿ ನನ್ನಲ್ಲಿ ಧೈರ್ಯವನ್ನು ಮೂಡಿಸಿದ ಅವರ ಆ ಮಾತಿನ ರೀತಿಯಿಂದಾಗಿಯೇ ಅವರು ನಿಜವಾದ ಅರ್ಥದಲ್ಲಿ ಐವರ್ನಾಡಿನ 'ಅಣ್ಣ' ಆದರು. ಐವರ್ನಾಡಿನ 'ಸ್ಪಂದಿಸುವ ಆತ್ಮ' ಆದರು.

ಬಾಲಕೃಷ್ಣ ಐವರ್ನಾಡಿಗೆ ಬಂದು ನೆಲೆಸಿದ್ದು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಐವರ್ನಾಡು ಅವರ ತಾಯಿಯ ತವರೂರು. ಎನ್ನೆಂ ಅವರ ತಂದೆ ನಿಡ್ಯಮಲೆ ಮುದ್ದಪ್ಪನವರು ಮಡಿಕೇರಿಯಲ್ಲಿ ಜಿಲ್ಲಾ ನ್ಯಾಯಾಧೀಶರಾಗಿದ್ದರು. ಮುದ್ದಪ್ಪನವರ ಸೋದರ ಸೋಮಣ್ಣನವರು ವಕೀಲರೂ, ಕೊಡಗಿನಿಂದ ಆಯ್ಕೆಯಾದ ಪಾರ್ಲಿಮೆಂಟ್ ಸದಸ್ಯರೂ ಆಗಿದ್ದರು. ಎನ್ನೆಂ ಅವರ ತಾಯಿ ದೇವಮ್ಮನವರು ಐವರ್ನಾಡಿನ ಮಡ್ತಿಲ ಬೆಳ್ಯಪ್ಪ ಗೌಡರ ಮಗಳು. ನಿಡ್ಯಮಲೆ ಮುದ್ದಪ್ಪ ಹಾಗೂ ದೇವಮ್ಮನವರಿಗೆ 11–4–1926ರಂದು ಮಗನಾಗಿ ಜನಿಸಿದ ಬಾಲಕೃಷ್ಣರಲ್ಲಿ ಈ ಎರಡೂ ಕುಟುಂಬಗಳ ಘನಸ್ತಿಕೆ ಹಾಗೂ ಗಾಂಭೀರ್ಯದ ಉದಾರತೆ ಹಾಗೂ ಸ್ನೇಹಮಯ ನಡವಳಿಕೆಯ ಗುಣಗಳು ಮೈಗೂಡಿಕೊಂಡವು.

[ಮುಂದುವರೆಯುವುದು]

## ಹಿತ ನುಡಿ

"ಈ ಭೂಮಿಯ ಮೇಲೆ ಬದುಕಿರುವ ಪ್ರತಿಯೊಬ್ಬರಿಗೂ ಅಗತ್ಯವಾದದ್ದನ್ನು ಪ್ರಕೃತಿ ಕೊಡಬಲ್ಲುದು ಆದರೆ ನಮ್ಮ ದುರಾಸೆಗಳನ್ನೆಲ್ಲ ಅದು ಪೂರೈಸಲಾರದು"

—ಗಾಂಧೀಜಿ

# ಗೌಡರ ವಿವಾಹ ಪದ್ಧತಿಯ ಶೋಬಾನೆಗಳು

[ಹಿಂದಿನ ಸಂಚಿಕೆಯಿಂದ]

**8. ಅ) ಬಣ್ಣ ಬಂಗಾರ ಬಳಸುವಾಗ ವರನ ಕಡೆಯಿಂದ ಹೇಳುವ ಹಾಡು :**

ಹಾರವರ ಮನೆ ಮುಂದೆ ಹಟ್ಟಿ ಕೆಸರು. ಪಟ್ಟಿ ಕೆಸರು ನೇವಳ ಜಾರಿದರೆ ಮಳಾಲಿಗೆ । ನೇವಳ ಜಾರಿದರೆ ಮಳಾಲಿಗೆ ಮಾವನವರೇ, ರುವಾರದ ಬಾಣ ಬಿಡುತ್ತಾನೆ । ರುವಾರದ ಬಾಣ ಬಿಡುತ್ತಾನೆ ಅಚೆಲೊಬ್ಬ ಮುತ್ತಿನ ಚೆಂಡಿಡಿದು ಬಲೂ ಜತನ ॥

ಶೆಟ್ಟಿಯವರ ಮನೆ ಮುಂದೆ ಹಟ್ಟಿ ಕೆಸರು, ಪಟ್ಟಿ ಕೆಸರು ಸರಪಣಿ ಜಾರಿದರೆ ಮಳಾಲಿಗೆ। ಸರಪಣಿ ಜಾರಿದರೆ ಮಳಾಲಿಗೆ ಮಾವನವರೆ ರುವಾರದ ಬಾಣ ಬಿಡುತ್ತಾನೆ । ರುವಾರದ ಬಾಣ ಬಿಡುತ್ತಾನೆ ಅಚೆಲೊಬ್ಬ ಚಿನ್ನದ ಚೆಂಡಿಡಿದು ಬಲೂ ಜತನ ॥

ಮುತ್ತಿನಂತಹ ಬಯಲಲ್ಲಿ, ಮುತ್ತಿನಂತಹ ದೊರೆರಾಯ. ಮುತ್ತು ಚೆಲ್ಲಾಡಿ ಬರುತ್ತಾನೆ ಮುತ್ತು ಚೆಲ್ಲಾಡಿ ಬರುತ್ತಾನೆ ಮಾವನವರೇ ಮುತ್ತು ಬೇಕೋ ಚಪ್ಪರಕ್ಕೆ ಮುತ್ತು ಬೇಕೋ ಚಾವಡಿಗೆ, ಮುತ್ತು ಬೇಕೋ ಮಾವನ ಮಗಾಳಿಗೆ ॥

ಚಿನ್ನದಂತಹ ಬಯಲಲ್ಲಿ ಚಿನ್ನದಂತಹ ದೊರೆರಾಯ ಚಿನ್ನ ಚೆಲ್ಲಾಡಿ ಬರುತ್ತಾನೆ । ಚಿನ್ನ ಚೆಲ್ಲಾಡಿ ಬರುತ್ತಾನೆ ಮಾವನವರೇ ಚಿನ್ನ ಬೇಕೋ ಚಪ್ಪರಕ್ಕೆ ಚಿನ್ನ ಬೇಕೋ ಚಾವಡಿಗೆ ಚಿನ್ನ ಬೇಕೋ ಮಾವನ ಮಗಾಳಿಗೆ ॥

ಹವಳದಂತಹ ಬಯಲಲ್ಲಿ ಹವಳದಂತಹ ದೊರೆರಾಯ ಹವಳ ಚೆಲ್ಲಾಡಿ ಬರುತ್ತಾನೆ । ಹವಳ ಚೆಲ್ಲಾಡಿ ಬರುತ್ತಾನೆ ಮಾವನವರೇ ಹವಳ ಬೇಕೋ ಚಪ್ಪರಕ್ಕೆ ಹವಳ ಬೇಕೋ ಚಾವಡಿಗೆ ಹವಳ ಬೇಕೋ ಮಾವನ ಮಗಾಳಿಗೆ ॥

ಮುತ್ತಿನಂತಹ ಚಪ್ಪರದಡಿಯಲ್ಲಿ ಮುತ್ತಿನಂತಹ ಮಣೆ ಇರಿಸಿ. ನಂದಾದೀವಿಗೆ ಎದುರಿಗೆ । ಬಾಳೆಯ ಹಣ್ಣು ನೋಡಿ ಬಾಲೆವರು ಬರೋದು ನೋಡಿ ಬಾಗಂಚಿನ ಸೇಲೆ ಸೆರಗಾ ನೋಡಿ। ಬಾಗಂಚಿನ ಸೇಲೆ ಸೆರಗಾ ನೋಡಿ, ಬಾಲೆನರು ಬರುವುದೊಂದು ಬೆಡಗಾ ನೋಡಿ ॥ ನಿಂಬೆಯ ಹಣ್ಣು ನೋಡಿ ರಂಬೆವರು ಬರುವುದ ನೋಡಿ ರಂಗಂಚಿನ ಸೇಲೆ ಸೆರಗಾ ನೋಡಿ । ರಂಗಂಚಿನ ಸೇಲೆ ಸೆರಗಾವ ನೋಡಿ, ರಂಬೆವರು ಬರುವುದೊಂದು ಬೆಡಗಾ ನೋಡಿ ॥ ಕಿತ್ತಳೆ ಹಣ್ಣು ನೋಡಿ, ಚಿಕ್ಕನರು ಬರುವುದ ನೋಡಿ ಚಿಕ್ಕಂಚಿನ ಸೇಲೆ ಸೆರಗಾ ನೋಡಿ । ಚಿಕ್ಕಂಚಿನ ಸೇಲೆ ಸೆರಗಾವ ನೋಡಿ, ಚಿಕ್ಕವರು ಬರುವುದೊಂದು ಬೆಡಗಾ ನೋಡಿ ॥

ಹಿಂಗಡಗ ಮುಂಗಡಗ ಬೆಳ್ಳಿಯ ಎಂಟು ಕಡಗ ಅಚೆಲೆಂಬವುದು ಹರಳೋಲೆ । ಅಚೆಲೆಂಬುವುದು ಹರಳೋಲೆ ಕಡಗ ಒಪ್ಪಾವೆ ನಿಮ್ಮ ಮನಸ್ಸೀಗೆ । ಒಪ್ಪಾವೆ ನಿಮ್ಮ ಮನಸ್ಸಿಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲಾ...॥

ಓಲೆಗೆ ಚಿನ್ನ ಕೊಂಡು ವೈನಾಡ ತಿರುಗಿದೆ ವೈನಾಡ ಅಗಸಾಲೆ ಮನೆಲಿಲ್ಲ ವೈನಾಡ ಅಗಸಾಲೆ ಮನೆಲಿಲ್ಲ ಮಂಟಪದಲಿಲ್ಲ ಓಲೆ ತಿದ್ದುವಾಗ ಬೆಳಗಾದೊ ॥ ಕೊಪ್ಪಿಗೆ ಚಿನ್ನ ಕೊಂಡು ಒಪ್ಪೂರ ತಿರುಗಿದೆ, ಒಪ್ಪೂರ ಅಗಸಾಲೆ ಮನೆಲಿಲ್ಲ । ಒಪ್ಪೂರ ಅಗಸಾಲೆ ಮನೆಲಿಲ್ಲ ಮಂಟಪದಲ್ಲಿಲ್ಲ ಕೊಪ್ಪು ಕೊಳ್ಳುವಾಗ ಬೆಳಗಾದೊ ॥

ಸ್ಯಾಲೆ ತಂದಿದೇವೆ ಹನ್ನೆರಡು ವರಹದ ಪಟ್ಟಿ, ಒಪ್ಪಾವೆ ನಿಮ್ಮ ಮನಸ್ಸಿಗೆ ಒಪ್ಪಾವೆ ನಿಮ್ಮ ಮನಸ್ಸಿಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲ । ರವಕೆ ತಂದಿದ್ದೇವೆ ಬಟ್ಟು ಕುಚ್ಚದ ಪಟ್ಟೆ ಆದವೋ ನಿಮ್ಮ ಮಗಳಿಗೆ । ಆದವೋ ನಿಮ್ಮ ಮಗಳಿಗೆ ಮಾವನವರೇ ತೋರಿರಿ ನಿಮ್ಮ ಸಭೇಗೆಲ್ಲಾ ॥

ಚಿನ್ನದ ಹೊರಗೋಡೆ ಚಿನ್ನದ ಒಳಗೋಡೆ, ಚಿನ್ನ ಹನಿಸಿದ ಅರಾಮನೆ । ಚಿನ್ನ ಹನಿಸಿದ ಅರಮನೆಯ ಒಳಗಿರುವ ಕನ್ನೇಯನೀಚೆಗೆ ಕರೇತನ್ನಿ॥ ಮುತ್ತಿನ ಹೊರಗೋಡೆ ಮುತ್ತಿನ ಒಳಗೋಡೆ ಮುತ್ತು ಹನಿಸಿದ ಅರಾಮನೆ । ಮುತ್ತು ಹನಿಸಿದ ಅರಮನೆ ಒಳಗಿರುವ ಕನ್ಯೆಯನೀಚೆಗೆ ಕರೇತನ್ನಿ ॥

ಪಟ್ಟೆ ಸೇಲೆಯೊಳಗೆ ಮುಚ್ಚಿಟ್ಟ ಮಾವನ ಮಗಳು ಸಿಕ್ಕಿತು ಶಿವನ ದಯೆಯಿಂದ । ಸಿಕ್ಕೀತು ಶಿವನ ದಯೆಯಿಂದ ಮಾವನವರೇ ಬಾಳೆ ಸುಳಿಯಂತೆ ಸುಳೂಕುತ್ತಾ । ಶ್ಯಾಲೆ ಹಚ್ಚಡದೊಳಗೆ ಮುಚ್ಚಿಟ್ಟ ಮಗಳು ಸಿಕ್ಕೀತು ಶಿವನ ದಯೆಯಿಂದ । ಸಿಕ್ಕೀತು ಶಿವನ ದಯೆಯಿಂದ ಮಾವನವರೇ ಶುಂಠಿ ಸುಳಿಯಂತೆ ಸುಳೂಕುತ್ತಾ ॥

**ಆ) ಬಣ್ಣ ಬಂಗಾರ ಬಳಸುವಾಗ ವಧುವಿನ ಕಡೆಯಿಂದ ಹೇಳುವ ಹಾಡು :**

ವಜ್ರದುಂಟಿಗೆ ಗೆಜ್ಜೆಸರ ಥಳಾ ಥಳಾ ಅದನ್ನಿಟ್ಟರೆ ಹೊಳೆವುದು ಪಳಾ ಪಳಾ<br>
ಸಾಲಮಾಡಿ ತರಬೇಡಿರಿ ನನುಗಾಗಿ ಹೆಚ್ಚಿಗೇನು ಬೇಡುವುದಿಲ್ಲ ನಿಮಗಾಗಿ ॥<br>
ಮೂಗಿನ್ಮೆಲೆ, ಮೂಗಿನ್ಮೆಲೆ, ಮೂಗಲ್ಲಿರುವ ಮುತ್ತಿನ ಬೊಟ್ಟು ಥಳಾ ಥಳಾ<br>
ಅದನ್ನಿಟ್ಟರೆ ಹೊಳೆವುದು ಪಳಾ ಪಳಾ॥

[ಮುಂದಿನ ಸಂಚಿಕೆ ನೋಡಿ]

## ಒಪ್ಪಿರುವ ಹೆಣ್ಣು

ಒಪ್ಪಿರುವ ಹೆಣ್ಣೆನಗೆ
ತಕ್ಕವಳೊ ಕಾಣೆ
ತಕ್ಕವಳೊ ತಿಳಿಯದೆಯೆ
ಒಪ್ಪಿರುವೆ ನಾನೆ.

ರೂಪದಲಿ ಕೀಳಿಲ್ಲ
ನಿಜವಾಗಿ ಚೆನ್ನೆ
ಆದರೂ ಅರಿತಿಲ್ಲ
ನಡೆತೆಯಾ ಚಿನ್ನೆ

ಮೀರಿಲ್ಲ ಹರೆಯವದು
ಹದಿನೆಂಟರನ್ನೆ
ಸಂಕೋಚವಿಂದೆನೆಗೆ
ಇರಬಹುದು ಜಾಣೆ.

ಕಣ್ಣಾಲಿಗಳು ಅಲುಗಿ
ಆಗುವುದು ಸನ್ನೆ
ಅದಕ್ಕೊಪ್ಪುವಾ ಅವಳ
ಕೆಂಪನೆಯ ಕೆನ್ನೆ.

ಉಬ್ಬಿರುವ ಕೆನ್ನೆಯಲಿ
ಉಕ್ಕಿತ್ತು ಸೋನೆ
ಕೇಳ ಬಯಸಿದೆ ಅವಳಿ
ಗಾಗಿರುವ ಬೇನೆ.

ಮನದಲ್ಲಿ ತಡೆಹಿಡಿಯೆ
ಆಗದರ ನಾನೆ
ಕೇಳಿದೆನು ಕೈಹಿಡಿದು
ಏನಾಯಿತೇನೆ ?

ನೋಡಿದಳು ಒಂದೆರಡು
ನಿಮಿಷ ನನ್ನನ್ನೆ
ಹಗೆಯಿಲ್ಲ ನಗೆಯಿಲ್ಲ
ಏನಿಲ್ಲ ಸೊನ್ನೆ.

ವಿನಯದಿಂ ಕೇಳಿದೆನು
ಸಿಟ್ಟೆಹುದು ಏನೇ ?
ಸಿಟ್ಟಿಲ್ಲ ಹೆಣ್ಣುಗಳ
ನಟನೆಯದು ತಾನೆ ?

ಅಷ್ಟಾಗಿ ವೈಮನಿಂದು
ನಕ್ಕಳಾ ಜಾಣೆ
ಬಾಯಿಂದಲಿ ಸಾಲಾಗಿ
ದಂತಗಳ ಸೇನೆ.

ಬಿಂಕದಲಿ ಸೆರೆಗಳೆದು
ಹೇಳಿದಳು ತಾನೆ
ಒಪ್ಪಿದರೆ ನೀವ್ ನನ್ನ
ಮರೆಯೆ ತಾಯೊಣೆ.

ಮನಬಿಚ್ಚಿ ಹೇಳಿದೆನು
ವರಿಸುವವನು ನಾನೆ
ಕಿಸುನಕ್ಕು ಕೇಳಿದೆನು
ಆಗಬಹುದೇನೇ ?

ನಾಚಿ ತಿರುಗಿದಳಾಗ
ನೋಡಿ ನನ್ನನ್ನೆ
ಇಳಿಬಿಟ್ಟ ಜಡೆಯವಳ
ಗಂಗೆಯಮುನೆ.

ಒಪ್ಪಿರುವ ಹೆಣ್ಣೆನಗೆ
ತಕ್ಕವಳೊ ಕಾಣೆ
ತಕ್ಕವಳೊ ತಿಳಿಯದೆಯೆ
ಒಪ್ಪಿರುವೆ ನಾನೆ.

○ ಹೊದ್ದೆಟೆ ಭವಾನಿಶಂಕರ್,
ಬೆಂಗಳೂರು.

## ಕುಶಾಲನಗರದಲ್ಲಿ ಮಾಜಿ ಸೈನಿಕರ ಸಂಘ ಸ್ಥಾಪನೆ

ದಿನಾಂಕ 6-9-98ರಂದು ಸಂಜೆ ಕುಶಾಲನಗರದ ಗೀತಾ ಲಾಡ್ಜ್‌ನಲ್ಲಿ ಸಭೆ ಕರೆದು ಸುಮಾರು 35 ಮಂದಿ ಮಾಜಿ ಸೈನಿಕರು ಸಭೆ ಸೇರಿ ಮಾಜಿ ಸೈನಿಕರ ಸಂಘವನ್ನು ಸ್ಥಾಪಿಸಲಾಯಿತು.

ಕುಶಾಲನಗರದ 2-3 ಕಿ.ಮೀ. ಮಿತಿಯೊಳಗೆ ಅಂದಾಜು 75ಕ್ಕೂ ಹೆಚ್ಚು ಮಾಜಿ ಸೈನಿಕರು ಹಾಲಿ ವಾಸವಾಗಿದ್ದಾರೆ. ಬಹುದಿನದಿಂದ ಶ್ರೀ ಕುಂಭಗೌಡನ ಸೋಮಣ್ಣನವರು ಸಂಘ ಸ್ಥಾಪಿಸಲು ಹಲವರಲ್ಲಿ ಪ್ರಸ್ತಾಪಿಸಿದ ಫಲವಾಗಿ ಈ ಸಂಘ ಸ್ಥಾಪನೆಯಾಗಲು ಕಾರಣವಾಯಿತು.

ಸದ್ಯಕ್ಕೆ ಪ್ರಾಥಮಿಕ ಹಂತದಲ್ಲಿ ಪ್ರಾರಂಭ ಮಾಡಿದ ಈ ಸಂಘದಲ್ಲಿ 5 ಜನ ಕಮಿಟಿಯವರನ್ನು ನೇಮಿಸಲಾಯಿತು.

ಅಧ್ಯಕ್ಷರಾಗಿ ಲೆಫ್ಟಿನೆಂಟ್ ಎಂ.ವಿ. ಭಾಸ್ಕರ್, ಕಾರ್ಯದರ್ಶಿಯಾಗಿ ಕುಂಭಗೌಡನ ಸೋಮಣ್ಣ, ಖಜಾಂಚಿಯಾಗಿ ಕಾನೆಹಿತ್ಲು ನಂಜಪ್ಪನವರನ್ನು, ಸದಸ್ಯರನ್ನಾಗಿ ಶ್ರೀಯುತರಾದ ಕ್ಯಾಪ್ಟನ್ ಮುಂಡಂಡ ಪಳಂಗಪ್ಪನವರು, ಮುಕ್ಕಾಟಿರ ರಾಜಶೇಖರ್ ಹಾಗೂ ಅಪ್ಪನೆರವಂಡ ಬೆಳ್ಳಿಯಪ್ಪನವರನ್ನು ಆಯ್ಕೆ ಮಾಡಲಾಯಿತು.

ಕುಶಾಲನಗರದ ಆಜು ಬಾಜಿನಲ್ಲಿರತಕ್ಕ ಮಾಜಿ ಸೈನಿಕರನ್ನು ಸಂದರ್ಶಿಸಿ ಅವರುಗಳನ್ನು ಸದಸ್ಯರುಗಳನ್ನಾಗಿ ಮಾಡಲು ಪ್ರೇರೇಪಿಸುವಂತೆ ತೀರ್ಮಾನಿಸಲಾಯಿತು.

ಕೊನೆಗೆ ಶ್ರೀ ಅಪ್ಪನೆರವಂಡ ಬೆಳ್ಳಿಯಪ್ಪನವರು ವಂದನಾರ್ಪಣೆ ಮಾಡಿದರು.

○ ವರದಿ : **ಕುದುಪಜೆ ಬಸಪ್ಪ.**

**ಕೊಡಗು ಸಂಗಾತಿ ಪತ್ರಿಕೆಗೆ**
**ಚಂದದಾರರಾಗಿ**

# ಆರೋಗ್ಯಚಿಂತನ : ಬೊಜ್ಜು

ಬೊಜ್ಜು ಇದೊಂದು ಅತ್ಯಂತವಾದ ಸಾಮಾನ್ಯವಾದ ತೊಂದರೆಯಾಗಿದೆ. ಬೊಜ್ಜು ಆರೋಗ್ಯದ ಲಕ್ಷಣವಲ್ಲ. ಬೊಜ್ಜು ಬರಲು ಹಲವಾರು ಕಾರಣಗಳಿರಬಹುದು. ಮುಖ್ಯವಾಗಿ ಆಲಸ್ಯಕರ ಜೀವನಶೈಲಿ ಹಾಗೂ ಅತಿಯಾಗಿ ತಿನ್ನುವುದು ಬೊಜ್ಜಿಗೆ ಕಾರಣ. ಯಾರು ಚೆನ್ನಾಗಿ ವ್ಯಾಯಾಮ, ಕೆಲಸ ಮಾಡುತ್ತಿರುತ್ತಾರೋ ಅವರಿಗೆ ಈ ಸಮಸ್ಯೆ ಎದುರಾಗುವುದು ತೀರಾ ಕಡಿಮೆ.

ಬೊಜ್ಜು ಹಲವಾರು ರೋಗಗಳನ್ನು ಆಹ್ವಾನಿಸುತ್ತದೆ. ಇದರಿಂದಾಗಿ ರಕ್ತದೊತ್ತಡ ಹೃದ್ರೋಗ, ಹೃದಯಾಘಾತ, ಮಧುಮೇಹ, ಪಿತ್ತಕೋಶಕ್ಕೆ ಸಂಬಂಧಿಸಿದ ತೊಂದರೆಗಳು, ಸಂಧುನೋವು ಅಲ್ಲದೆ ಇನ್ನಿತರ ಸಮಸ್ಯೆಗಳು ಉದ್ಭವಿಸಬಹುದು.

ಸರಳವಾದ ಸೂತ್ರವೊಂದರಿಂದ ನಿಮ್ಮ ತೂಕವೆಷ್ಟಿರಬೇಕೆಂಬುದನ್ನು ಕಂಡುಕೊಳ್ಳಬಹುದು. ಸೆಂ. ಮೀ ನಿಂದ ಅಳೆದ ನಿಮ್ಮ ಎತ್ತರದಿಂದ 100ನ್ನು ಕಳೆದರೆ ಎಷ್ಟು ಬರುತ್ತದೋ ಅದು ನಿಮ್ಮ ಸರಿಯಾದ ತೂಕವಾಗಿರುತ್ತದೆ. ಅದಕ್ಕಿಂತ ಹೆಚ್ಚಾಗುತ್ತಾ ಹೋದಲ್ಲಿ ನೀವು ಬೊಜ್ಜು ಕಡೆಗೆ ಹೋಗುತ್ತಿದ್ದಿರೆಂದು ಅರ್ಥ. ಉದಾ : ನಿಮ್ಮ ಎತ್ತರ 160 ಸೆಂ ಮೀ. ಇದ್ದಲ್ಲಿ ನಿಮ್ಮ ಸರಿಯಾದ ತೂಕ 160–100 ಅಂದರೆ 60 ಕೆ.ಜಿ. ಇರಬೇಕು. ಇದಕ್ಕಿಂತ ಜಾಸ್ತಿಯಾದಂತೆ ನೀವು ಎಚ್ಚರ ವಹಿಸಬೇಕು.

ಬೊಜ್ಜು ಇರುವವರು ದಿನಾ ನಡೆಯುವುದು, ಬೆಳಗ್ಗಿನ ಜಾವ ನಿಧಾನವಾಗಿ ಓಡುವುದು, ಈಜುವುದು, ಆಟವಾಡುವುದು ಅಥವಾ ನಿಯಮಿತವಾದ ವ್ಯಾಯಾಮ ಮಾಡಬೇಕು. ಅತಿಯಾಗಿ ಏನನ್ನೂ ತಿನ್ನಬಾರದು. ಅದರಲ್ಲಿ ಮುಖ್ಯವಾಗಿ ಪಿಷ್ಟದ ಆಹಾರವನ್ನು–ಅಕ್ಕಿ, ಬಟಾಣಿ, ಮರಗೆಣಸು ಕಡಿಮೆ ಮಾಡಬೇಕು. ಕೊಬ್ಬು ಇರುವ ಮಾಂಸ, ಮೊಟ್ಟೆ, ತುಪ್ಪ, ಹಾಲು, ಎಣ್ಣೆ ಭರಿತ ಕರಿದ ತಿಂಡಿಗಳನ್ನು ಸಕ್ಕರೆ ಅಥವಾ ಇನ್ನಿತರ ಸಿಹಿ ತಿಂಡಿಗಳನ್ನು ತಿನ್ನಬಾರದು.

ತೂಕ ಇಳಿಸಲು ಈಗ ತಿನ್ನುತ್ತಿರುವ ಅರ್ಧದಷ್ಟು ಮಾತ್ರ ತಿನ್ನಿ ! ಹಣ್ಣು, ತರಕಾರಿ, ಸೊಪ್ಪನ್ನು ಧಾರಾಳವಾಗಿ ತಿನ್ನಬಹುದು.

ಒಮ್ಮೆ ಬೊಜ್ಜು ಬಂದ ಮೇಲೆ ತೂಕವಿಳಿಸುವುದು ತುಂಬಾ ಕಷ್ಟ. ಆದ್ದರಿಂದಲೇ ಎಲ್ಲರೂ ಬೊಜ್ಜು ಬಾರದಂತೆ ಮೊದಲೇ ಜಾಗ್ರತರಾಗಬೇಕು. ನಿಯಮಿತವಾದ ವ್ಯಾಯಾಮ ಹದವಾದ ಊಟ, ಕ್ರಮ ಹಾಗೂ ತೂಕದ ಮೇಲಿನ ಜಾಗೃತ ದೃಷ್ಟಿ ಈ ಅಂಶಗಳಿಂದ ಇದು ಸಾಧ್ಯವಿದೆ. ○

ಡಾ|| ಎನ್. ಎಸ್. ಪ್ರವೀಣ [ಎಂ. ಡಿ.], ಮಡಿ

## ನಿಮಗೆ ತಿಳಿದಿರಲಿ

1. ಹಾರಾಡುವ ಸಸ್ತನಿ—ಬಾವಲಿ
2. ಭಾರತದ ರಾಷ್ಟ್ರೀಯ ಪ್ರಾಣಿ—ಹುಲಿ
3. ದೀರ್ಘಕಾಲ ಬದುಕುವ ಪ್ರಾಣಿ—ಆಮೆ
4. ಅತೀ ವೇಗವಾಗಿ ಓಡುವ ಸಸ್ತನಿ—ಚಿರತೆ
5. ಶಬ್ದವನ್ನು ಮಾಡಲಾರದ ಪ್ರಾಣಿ—ಜಿರಾಫೆ

○ ಸಂಗ್ರಹ : ಮುಕ್ಕಾಂಡ್ರ ವಾಣಿಗೋಪಾಲ.

## ನ ಗೆ ಹ ನಿ ಗ ಳು

ಜಡ್ಜ್ : ಕಳ್ಳತನ ತಪ್ಪು, ದುಡಿದು ಬೆವರು ಹರಿಸಿ ತಿನ್ನಬೇಕು.

ಕಳ್ಳ : ನಾನು ರಕ್ತ ಹರಿಸಿದ್ದೀನಿ ಸ್ವಾಮಿ. ಕಿಟಕಿ ಸರಳುಗಳು ಮುರಿಯುವಾಗ ಗಾಯ ಆಯ್ತು, ತಿಜೋರಿ ಬೀಗ ಮುರಿಯುವಾಗ ಬೆರಳು ನುಜ್ಜುಗುಜ್ಜಾಯ್ತು. ಕಷ್ಟ ಪಟ್ಟು ಮಾಡಿದ ಸಂಪಾದನೆ ಸ್ವಾಮಿ ನನ್ನದು.

❁ ❁ ❁

ವಧು ಪರೀಕ್ಷೆ ಮುಗಿದಿತ್ತು

'ಹುಡುಗೀನ ಚೆನ್ನಾಗಿ ಗಮನಿಸಿದೆಯೇನೋ ?'

'ಓಹೋ ನಾನು ಕೆಲಸ ಮಾಡೋದೆ ಸರ್ವೆ ಡಿಪಾರ್ಟ್‌ಮೆಂಟ್‌ನಲ್ಲಿ'

'ಏನು ವಿಶೇಷ ಕಂಡೆ ಅವಳಲ್ಲಿ ?'

'ಕುಂಕುಮದ ಡಯಾಮೀಟರ್ ಅರ್ಧ ಅಂಗುಲ ಇತ್ತು. ಹುಬ್ಬು ಎರಡೂವರೆ ಅಂಗುಲ ಉದ್ದ, ರವಿಕೆಗೆ ಎಂಟು ಹುಕ್ಕು ಗಳಿದ್ದವು...

'ಸಾಕು ಬಿಡು' ಹಿರಿಯರು ಗಾಬರಿಯಿಂದ ಮಾತಿಗೆ ತಡೆಯೊಡ್ಡಿದರು.

○ ವಿಜಯ್, ಮೈಸೂರು.

# ನವರಾತ್ರಿ ಹಬ್ಬ (ದಸರಾ)

ಆಶ್ವಯುಜ ಮಾಸ ಶುಕ್ಲ ಪ್ರತಿಪದೆ [ಪಾಡ್ಯ]ಯಿಂದ ಒಂಬತ್ತು ದಿನಗಳ ಕಾಲ ಆಚರಿಸುವ ಹಬ್ಬವೇ ನವರಾತ್ರಿ ಹಬ್ಬ. ಹತ್ತನೆಯ ದಿನವೇ ವಿಜಯದಶಮಿ. ಆಶ್ವಯುಜ ಮಾಸದ ಶುದ್ಧ ಪಾಡ್ಯದಿಂದ ದಶಮಿಯವರೆಗೆ ಆಚರಿಸುವ ಈ ಹಬ್ಬಕ್ಕೆ ದದಶಹರ ದಶರಾತ್ರಿ ಅಥವಾ ದಸರಾ ಎಂದು ಹೆಸರು. ಕೆಲವು ಪ್ರದೇಶಗಳಲ್ಲಿ ಈ ಹಬ್ಬವನ್ನು ಒಂಬತ್ತು ದಿನಗಳು ಮಾತ್ರ ಆಚರಿಸುವುದರಿಂದ ನವರಾತ್ರಿ ಎಂದೂ ಕರೆಯುತ್ತಾರೆ. ದೇವತೆಗಳಿಗೂ ದಾನವರಿಗೂ ನಡೆದ ಸಮರದಲ್ಲಿ ದೇವತೆಗಳು ದಾನವರನ್ನು ಸಂಹರಿಸಿ ವಿಜಯ ಪಡೆದುದರ ಪ್ರತೀಕವಾಗಿ ಈ ಹಬ್ಬವನ್ನು ಅನಾದಿಕಾಲದಿಂದಲೂ ಆಚರಿಸುತ್ತಾ ಬಂದಿರುವುದನ್ನು ಗುರುತಿಸಬಹುದು. ನವರಾತ್ರಿ, ವಿಜಯದಶಮಿಯನ್ನು ಮನೆ ಮನೆಗಳಲ್ಲಿ, ಅರಮನೆ–ಗುರುಮನೆಗಳಲ್ಲಿಯೂ, ದಸರಾ ಎಂದು ಕರ್ನಾಟಕದ ಮೈಸೂರಿನಲ್ಲಿಯೂ ವೈಭವದಿಂದ ಆಚರಿಸಲಾಗುತ್ತದೆ. ಲಕ್ಷಾಂತರ ಭಕ್ತರ, ಯಾತ್ರಾರ್ಥಿಗಳ ಆಕರ್ಷಣೆಯಿಂದ ಆಗ ಮೈಸೂರು ಕಂಗೊಳಿಸುತ್ತದೆ. ಹತ್ತು ದಿನಗಳೂ ಮೈಸೂರು ಸಿಂಗರಿಸಿದ ನವವಧುವಿನಂತೆ ಕಾಣುತ್ತದೆ. ಮೈಸೂರು ದಸರಾ ಶತಶತಮಾನಗಳಿಂದಲೂ ಪ್ರಸಿದ್ಧವಾಗಿ, ವಿಜಯನಗರ, ಮೈಸೂರು ಅರಸರ ಕಾಲದಲ್ಲಿ ವಿಶೇಷ ಮನ್ನಣೆಗೆ ಪಾತ್ರವಾಯಿತು.

ಮುಖ್ಯವಾಗಿ ನವರಾತ್ರಿ ದುಷ್ಟ ಶಿಕ್ಷಕಳೂ, ಶಿಷ್ಟ ರಕ್ಷೆಕಳೂ ಆದ ಆದಿಶಕ್ತಿಯ ಹಬ್ಬ. ಶಿವೆ ಎಂದು ಹೇಳುವ ಆದಿ ಶಕ್ತಿಗೆ ಅನೇಕ ಹೆಸರುಗಳು. ಬ್ರಹ್ಮಾಣಿ, ಆದಿ ಮಾತೆ, ದುರ್ಗೆ, ಕಾತ್ಯಾಯಿನೀ, ಚಂಡೀ, ಬ್ರಹ್ಮ ಶಕ್ತಿ ಸ್ವರೂಪಿಣಿ, ಉಮಾ, ಶಾಂಭವಿ, ಚಾಮುಂಡೇಶ್ವರಿ, ಮಹಿಷಾಸುರ ಮರ್ದಿನಿ, ಭೂತ ದಾಯಿನಿ, ಶಂಕರಪ್ರಿಯೆ, ನಾರಾಯಣಿ ಎಂದೆಲ್ಲ ಈ ಹೆಸರುಗಳಿವೆ. ನವರಾತ್ರಿಯ ಒಂಬತ್ತು ದಿನಗಳಲ್ಲಿ ಆದಿಪರಾಶಕ್ತಿಯನ್ನು, ಪ್ರಥಮ ದಿವಸೇ ಯೋಗ ನಿದ್ರಾ, ದ್ವಿತೀಯಾಯಾಂ ದೇವಜಾತಾ, ತೃತೀಯಾಂ ಮಹಿಷಾಸುರ ಮರ್ದಿನೀ, ಚತುರ್ಥ್ಯಾಂ ಶೈಲಜಾದುರ್ಗಾ, ಪಂಚಮ್ಯಾಂ ಧೂಮ್ರಃ ದುರ್ಗಾ ಷಷ್ಠ್ಯಾಂ ಚಂಡಮುಂಡಃ, ಸಪ್ತಮ್ಯಾಂರಕ್ತಬೀಜಃ ದುರ್ಗಾ, ಅಷ್ಟಮ್ಯಾಂ ನಿಶುಂಭಃ, ನವಮ್ಯಾಂ ಶುಂಭಃ ದುರ್ಗಾ ಎಂದು ನವ ವಿಧದಲ್ಲಿ ದಿನಕ್ಕೊಂದು ರೀತಿಯ ಆಕಾರದಲ್ಲಿ ಪೂಜಿಸಲಾಗುವುದು. ಆಶ್ವಯುಜ ಮಾಸದ [ಸೆಪ್ಟೆಂಬರ್–ಅಕ್ಟೋಬರ್ ತಿಂಗಳು] ಶುಕ್ಲಪಕ್ಷದ ಏಳು, ಎಂಟು ಮತ್ತು ಒಂಬತ್ತನೇ ದಿನಗಳಲ್ಲಿ ದುರ್ಗಾಪೂಜಾವಿಧಿಗಳು ನಡೆಯುತ್ತವೆ. ನವರಾತ್ರಿಯ ಮುಖ್ಯ ದಿನಗಳೆಂದರೆ,

1. ಸರಸ್ವತಿ ಪೂಜಾದಿನ [ಸಾಮಾನ್ಯವಾಗಿ ಏಳನೆಯ ದಿನ]
2. ದುರ್ಗಾಷ್ಟಮಿ
3. ಮಹಾನವಮಿ ಅಥವಾ ಆಯುಧ ಪೂಜಾ ಹಾಗೂ
4. ವಿಜಯದಶಮಿ [ಲಕ್ಷ್ಮಿ ಪೂಜೆ ಇತ್ಯಾದಿ]



ನವರಾತ್ರಿಯ ಒಂಬತ್ತು ದಿನಗಳೂ ಭಾರತದ ಜನ ತಮ್ಮ ಮನೆಗಳಲ್ಲಿ ಅದರಲ್ಲಿಯೂ ಕರ್ನಾಟಕದ ಮನೆಮನೆಗಳಲ್ಲಿ ಗೊಂಬೆಗಳನ್ನು ಕೂರಿಸುವುದರಿಂದ ಈ ಹಬ್ಬವನ್ನು ಗೊಂಬೆ ಹಬ್ಬ ಎಂದೂ ಕರೆಯುವರು. ಮೈಸೂರು ಅರಸರು ಅರಮನೆಯಲ್ಲಿ ಗೊಂಬೆಗಳನ್ನು ಕೂರಿಸುತ್ತಿದ್ದುದು ವಿಶೇಷವಾಗಿರುತ್ತಿತ್ತು. ನವರಾತ್ರಿ ಪೂಜೆಗಳು ಸಾಮಾನ್ಯವಾಗಿ ಸಪ್ತಮಿ ದಿನದಂದು ಶಾರದಾಪೂಜೆಯಿಂದ ಆರಂಭವಾಗುತ್ತವೆ. ಆಶ್ವಯುಜ ಶುಕ್ಲ ಸಪ್ತಮಿ ಮೂಲಾನಕ್ಷತ್ರದಲ್ಲಿ ಹಿಂದುಗಳು ಶಾರದಾ ಪೂಜೆ ಮಾಡುವರು. ಸರಸ್ವತಿ ವಿದ್ಯಾಧಿದೇವತೆ. ಆಕೆಗೆ ವಾಣಿ, ಶಾರದೆ, ವೀಣಾಪಾಣಿ ಎಂದೆಲ್ಲ ಹೆಸರುಗಳಿವೆ. ಶಾರದೆ ಬ್ರಹ್ಮನ ರಾಣಿ. ವಿದ್ಯೆ ಎಲ್ಲರಿಗೂ ಬೇಕು. ವಿದ್ಯೆ ಇಲ್ಲದವನು ಪಶುಸಮಾನ. ಮಕ್ಕಳಿಂದ ಹಿಡಿದು ಮುದುಕರವರೆಗೂ ಶಾರದಾ ಪೂಜೆ ಮಾಡುತ್ತಾರೆ. ವಿದ್ಯೆಗೆ ಸಮನಾದ ಸಂಪತ್ತಿಲ್ಲ. ವಿದ್ಯಾ

[12ನೇ ಪುಟ ನೋಡಿ]

# ಅಳಿವಿನ ಅಂಚಿನಲ್ಲಿ ಅರೆಭಾಷೆ

ನಾವು ನಮ್ಮ ಕೊಡಗು ಸಂಗಾತಿಯ ಹಿಂದಿನ ಸಂಚಿಕೆಗಳಲ್ಲಿ ಸಂಸ್ಕೃತಿ ಮತ್ತು ಸಂಪ್ರದಾಯಗಳ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದೇವೆ. ಆದರೆ ಅಲ್ಲಿ ಯಾರೂ ಸಹ ನಮ್ಮ ಅರೆ ಭಾಷೆಯ ಬಗ್ಗೆ ವಿಶ್ಲೇಷಣೆ ನಡೆಸಿದಂತಿಲ್ಲ. ನಮ್ಮ ಸಂಸ್ಕೃತಿ ಮತ್ತು ಸಂಪ್ರದಾಯದ ಉಳಿವಿಗೆ ನಮ್ಮ ಅರೆ ಭಾಷೆಯು ಬಹಳ ಪ್ರಾಮುಖ್ಯತೆಯನ್ನು ನೀಡುತ್ತಿದೆ. ಇಂದು ನಮ್ಮಲ್ಲಿ ಎಷ್ಟೋ ಮಂದಿ ಅರೆಭಾಷೆ ಗೌಡರಿಗೆ ಅರೆಭಾಷೆ ಮಾತನಾಡಲು ಬರುವುದಿಲ್ಲ.

ಇಂದು ಹುಟ್ಟುವ ಹೆಚ್ಚಿನ ಮಕ್ಕಳು ಕಲಿಯುತ್ತಿರುವುದು ಕನ್ನಡ ಭಾಷೆಯನ್ನು. ಅಂದಮಾತ್ರಕ್ಕೆ ಕನ್ನಡವನ್ನು ಕಲಿಯಬಾರದೆಂದಲ್ಲ. ಪ್ರತಿಯೊಬ್ಬ ಮನುಷ್ಯನಿಗೆ ಮೊದಲು ದೇಶಾಭಿಮಾನ ನಂತರ ಭಾಷಾಭಿಮಾನ ಇರಲೇಬೇಕು. ಪ್ರತಿಯೊಂದು ಜಾತಿಯವರು [ಇಲ್ಲಿ ಜಾತಿಯ ಬಗ್ಗೆ ಹೇಳಿರುವುದಕ್ಕೆ ಕ್ಷಮಿಸಿ] ಅವರವರ ಜಾತಿಗೆ ಸಂಬಂಧಿಸಿದಂತೆ ಅವರವರ ಮಾತೃಭಾಷೆಯನ್ನು [ಕೊಡವ, ತುಳು, ಮಲೆಯಾಳ, ತಮಿಳು ಹೀಗೆ] ಕಲಿಯುವುದು ಮಾತ್ರವಲ್ಲ ಬೇರೆಯವರು ಸಹ ಅದನ್ನು ಕಲಿಯುವಂತೆ ಪ್ರಚೋದಿಸುತ್ತಾರೆ. ಆದರೆ ನಮ್ಮ ಗೌಡರು ಮಾಡುವುದೇನು ಎಂಬುವನ್ನು ಅವಲೋಕಿಸಿದಾಗ ಬಹಳ ವಿಷಾದವಾಗುತ್ತದೆ. ಕೆಲವರಿಗೆ ನಮ್ಮ ಭಾಷೆಯನ್ನು ಕಲಿಯುವುದು, ಕಲಿಸುವುದರಲ್ಲಿ ನಾಲ್ಕಾರು ಅನ್ಯ ಭಾಷೆಗಳು ಸೇರುವ ಕಡೆಗಳಲ್ಲಿ ಮಾತನಾಡಲು ಹಿಂದು ಮುಂದು ನೋಡುತ್ತಾರೆ. ಕಾರಣವೇನು ? ನಮ್ಮ ಭಾಷೆಯಲ್ಲಿ ಏನಾದರೂ ಕುಂದು ಕೊರತೆಗಳಿವೆಯಾ ? ಆ ಸಂಕೋಚ ಏಕೆ ? ಇದಕ್ಕೆ ಮುಖ್ಯ ಕಾರಣ ನಮ್ಮ ಹಿರಿಯರು ಮತ್ತು ಪೋಷಕರು. ಪೋಷಕರಾದವರು ತಮ್ಮ ಮಕ್ಕಳಿಗೆ ಪ್ರಥಮ ಹಂತದಿಂದಲೇ ಅರೆಭಾಷೆಯನ್ನು ಕಲಿಸಲು ಸಫಲರಾಗಬೇಕು. ಇಂದು ಹೆಚ್ಚಿನವರು ಈ ಕೆಲಸವನ್ನು ಮಾಡುತ್ತಿಲ್ಲ ಬದಲಾಗಿ ಹುಟ್ಟಿದ ಮಗುವಿಗೆ ಮೊದಲು ಕನ್ನಡ ಅಥವಾ ಇಂಗ್ಲೀಷ್ ಭಾಷೆಯನ್ನು ಕಲಿಸುವುದು ವಾಡಿಕೆಯಾಗಿದೆ. ನಮ್ಮ ಜಿಲ್ಲೆಯ ಹೊರಗಡೆ, ಅಂತರ ರಾಜ್ಯ, ಹೊರರಾಷ್ಟ್ರಗಳಲ್ಲಿ ನೆಲೆಸಿರುವ ಗೌಡ ಜನಾಂಗದವರು ಆಯಾ ರಾಜ್ಯಗಳ ಭಾಷೆಗಳನ್ನು ಅಥವಾ ಬೇರೆ ಭಾಷೆಗಳನ್ನು ಬಹಳ ಸುಲಭವಾಗಿ ಕಲಿಯಲು ಸಫಲರಾಗುತ್ತಾರೆ. ಆದರೆ ಅರೆಭಾಷೆಯನ್ನು ಮಾತ್ರ ಏಕೆ ಕಲಿಯಲು ಸಾಧ್ಯವಾಗುತ್ತಿಲ್ಲ.

ಕೆಲವರಿಗೆ ತಮ್ಮ ಮಕ್ಕಳು ಅರೆಭಾಷೆಯಲ್ಲಿ ಮಾತನಾಡದೆ, ಕನ್ನಡ ಅಥವಾ ಇಂಗ್ಲೀಷ್‌ನಲ್ಲಿ ಮಾತನಾಡಿದರೆ ಅವರಿಗೆ ಅದು ಸಂತೋಷ ಮತ್ತು ಹೆಮ್ಮೆ ಅನ್ನಿಸುವಂತಿದೆ. ಆದ್ದರಿಂದ ಪ್ರತಿಯೊಬ್ಬ ಹಿರಿಯರು, ಪೋಷಕರು, ಅರೆಭಾಷೆ ತಿಳಿದವರು ತಂದೆ ತಾಯಿಯರು ತಮ್ಮ ಮಕ್ಕಳಿಗೆ ಖಡ್ಡಾಯವಾಗಿ ಅರೆ ಭಾಷೆಯನ್ನು ಕಲಿಯಲು ಪ್ರೋತ್ಸಾಹಿಸಬೇಕು. ಯಾವುದೇ ಜಾತಿ, ಜನಾಂಗದವರನ್ನು ತೆಗೆದುಕೊಂಡರೆ ಅವರು ಮೊದಲು ಅವರ ಮಕ್ಕಳಿಗೆ ಅವರ ಮಾತೃಭಾಷೆಯನ್ನು ಕಲಿಸುತ್ತಾರೆ. ಆದರೆ ನಮ್ಮ ಗೌಡರು ಅರೆಭಾಷೆಯನ್ನು ಬಿಟ್ಟು ಬೇರೆ ಭಾಷೆಗಳನ್ನು ಕಲಿತು ಆ ಭಾಷೆಗಳಲ್ಲಿಯೇ ವ್ಯವಹರಿಸುವುದು ಅವರಿಗೆ ಹೆಮ್ಮೆ ತರುವ ವಿಷಯವಾದಂತಿದೆ.

ಕನ್ನಡ, ಇಂಗ್ಲೀಷ್, ಹಿಂದಿ ಈ ಭಾಷೆಗಳನ್ನು ನಾವು ಶಾಲೆ ಕಾಲೇಜುಗಳಲ್ಲಿ ಕಲಿಯಲು ಅವಕಾಶವಿದೆ. ಆದರೆ ಅರೆ ಭಾಷೆಯನ್ನು ಶಾಲೆ, ಕಾಲೇಜುಗಳಲ್ಲಿ ಕಲಿಯಲು ಅವಕಾಶಗಳು ಕಡಿಮೆ ಅನ್ನುವುದಕ್ಕಿಂತ ಇಲ್ಲವೇ ಇಲ್ಲ ಎನ್ನಬಹುದು. ಹುಟ್ಟಿದ ಮಗು ಮೊದಲ ಹಂತದಲ್ಲಿಯೇ ಅರೆಭಾಷೆಯನ್ನು ಕಲಿತರೆ ಮಾತ್ರ ಭಾಷೆ ಉಳಿಯಲು ಸಾಧ್ಯ. ವಿಪರ್ಯಾಸದ ಸಂಗತಿಯೆಂದರೆ ಈಗಾಗಲೇ ಎಷ್ಟೋ ಮಂದಿ ಗೌಡರು ಅರೆಭಾಷೆಯನ್ನು ಮರೆಯುವಲ್ಲಿ ಯಶಸ್ವಿಯಾಗಿದ್ದಾರೆ. ಹೀಗಿರುವಾಗ ಅವರು ಅವರ ಮಕ್ಕಳಿಗೆ ಅರೆಭಾಷೆಯನ್ನು ಹೇಗೆ ಕಲಿಸಲು ಸಾಧ್ಯ. ನಮ್ಮ ಈ ನಡವಳಿಕೆಗಳು ಹೀಗೆಯೇ ಮುಂದುವರಿದರೆ ಕೊಡಗಿನ ಕೆಲವು ಭಾಗಗಳನ್ನು ಬಿಟ್ಟರೆ ಬೇರೆಲ್ಲಿಯೂ ಸಹ ನಾವು ಅರೆಭಾಷೆಯನ್ನು ಕಾಣಲು ಸಾಧ್ಯವಿಲ್ಲದಂತಾಗುತ್ತದೆ.

ಯಾವುದೇ ಜಾತಿ ಅಥವಾ ಜನಾಂಗದ ಸಭೆ ಸಮಾರಂಭಗಳಲ್ಲಿ ಅವರವರ ಭಾಷೆಗಳನ್ನು ಬಳಸಿ ಕಾರ್ಯಕ್ರಮಗಳನ್ನು ನಡೆಸುವುದನ್ನು ನಾವು ಕಾಣುತ್ತೇವೆ. ಆದರೆ ನಮ್ಮ ಯಾವುದೇ ಸಭೆ ಸಮಾರಂಭಗಳಲ್ಲಿ ಕನ್ನಡ ಅಥವಾ ಇಂಗ್ಲೀಷನ್ನು ಉಪಯೋಗಿಸುವುದು ವಾಡಿಕೆಯಾಗಿದೆ. ಕಾರಣವೇನೆಂದರೆ ಎಷ್ಟೋ ಮಂದಿ ಅರೆಭಾಷಿಗರಿಗೆ ಅರೆಭಾಷೆಯೇ ಅರ್ಥವಾಗುವುದಿಲ್ಲ. ನಾವು ನಮ್ಮನ್ನು ಬೇರೆಯವರೊಂದಿಗೆ ಗುರ್ತಿಸಿಕೊಳ್ಳಲು ಭಾಷೆ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಸಂಸ್ಕೃತಿ, ಸಂಪ್ರದಾಯ ಉಡುಗೆ-ತೊಡಿಗೆ, ಊಟ-ತಿಂಡಿ, ಆಚಾರ-ವಿಚಾರಗಳೆಲ್ಲವೂ ಸಾಮಾನ್ಯವಾಗಿ ಎಲ್ಲಾ ಜಾತಿ ಜನಾಂಗದವರಲ್ಲಿ ಒಂದೇ ತರ ಇರುತ್ತವೆ. ಆದ್ದರಿಂದ ಭಾಷೆಗೆ ಬಹಳ ಮಹತ್ವ ಕೊಡಬೇಕು.

[12 ನೇ ಪುಟ ನೋಡಿ]

ಮಿತ್ತೂರು ಬಿ. ಸುಬ್ರಮಣಿ, ಮೈಸೂರು.

## ಸಂಗಾತಿ ಪದಬಂಧ-6

### ಎಡದಿಂದ ಬಲಕ್ಕೆ

1 ಐದಕ್ಷರದ 'ಮದುವೆಯಾಗುವುದು'–5
3 ಸರ್ವನಾಶವುಂಟುಮಾಡುವ ಸಮಯ–5
5 ಈ ಬೆಳಕು ನೀಡುವ ಸಾಧನ ಅಸಲಿಯಲ್ಲ–5
8 ಹೆಂಡತಿಯ ಅಗಲಿಕೆ–5
11 ಅಶಾಶ್ವತ ಎಂಬರ್ಥ ನೀಡುವ ಪದ–5
12 'ಹುಟ್ಟಿದ ಗೃಹಕ್ಕೆ ಪ್ರಯಾಣ' ಎಂಬುದನ್ನು ಹೀಗೂ ಹೇಳಬಹುದಲ್ಲ–9
14 ಭಾರತಿ ದೀಪಗಳಿಂದ ಎತ್ತಿದ ನೀರಾಜನ–3
15 ಐದಕ್ಷರದ 'ಅಕ್ಷರ ಕಲಿಕೆ'–5
17 ಶಕುನಿ ದುರ್ಬಲನಾಗಿದ್ದಾನೆ–5
19 'ಮಾಲೆ ರಚನೆ' ಯನ್ನು ಹೀಗೆ ಹೇಳೋಣ–5
20 ನೃತ್ಯ ಕಲಿಸುವ ಕೇಂದ್ರ–5

### ಮೇಲಿನಿಂದ ಕೆಳಕ್ಕೆ

1 ಮೂರಕ್ಷರದ 'ಪವಿತ್ರ'–3
2 ಪದವಿ ಪಡೆಯಲು ಬೆಳೆಸಿದ ಪ್ರಯಾಣ ಕೆಳಗಿನಿಂದ ಮೇಲೇರಿದೆ–3
3 ವಿಪ್ರನಿಗೆ ಬಂದ ಮಿತಿಮೀರಿದ ಕೋಪ–3
4 ಲವನು ತಂದ ಸಂಬಾರ ಪದಾರ್ಥ–3
6 ಕಪ್ಪು ಪಕ್ಷಿಗಳು ಹೊರಡಿಸಿದ ಮಧುರ ಧ್ವನಿ–4
7 ದಿನವೂ ಕಷ್ಟಪಡುವ ಬಡವ–2
9 'ವಿಚಿತ್ರವಾದ ಆಕೃತಿ'–7
10 ಸಂಗೀತಳು ಮುಡಿದ ಪುಷ್ಪ–5
12 ಎರಡಕ್ಷರದ 'ಶಿರ'–2
13 ರಕ ಸರು ಕೆಳಗಿನಿಂದ ಮೇಲೆ ಬಂದಿದ್ದಾರೆ–4
15 ಬಟ್ಟೆ ಒಗೆಯುವ ಕುಲಕಸುಬು ಅವನದು–3
16 ಯಾವ ಕಡೆಯಿಂದ ನೋಡಿದರೂ ಇದು 'ವಂಚನೆ' ಹೊಂದಿರುವ ತಿಂಡಿ-3
17 ಮನಸ್ಸನ್ನು ಹೊಂದಿರುವ 'ಸಮಾಧಾನ'–3
18 ಇನ್ನೊಂದು'ತಂಟೆ'–3

## ಪದಬಂಧ 5ಕ್ಕೆ ಉತ್ತರ

### ಎಡದಿಂದ ಬಲಕ್ಕೆ

1 ಕರಿವದನ
3 ಅಧಿನಾಯಕ
5 ರಕ್ಷಾಬಂಧನ
7 ವನಿತೆಯರು
12 ನಶವೇಧಿಅ
13 ಬಿಳಿಗಿರಿ
14 ನುಡಿಗಟ್ಟು
15 ಅವಲೋಕನ
17 ಅವಹೇಳನ
19 ನವನಾಯಕ
20 ತಲೆತಿರುಕ

### ಮೇಲಿನಿಂದ ಕೆಳಕ್ಕೆ

1 ಕರ್ತಾರ 2 ನಯನ 3 ಅತೀವ
4 ಕದಿರು 6 ಧಂಬಂಸನಳಿರುಕ
8 ನಿನ್ನೆಯ ಅನುಭವ 9 ಛದ್ಮವೇಷ
10 ವಾಚಾಳಿ 11 ಹುಡುಗ
15 ಅರ್ಜುನ 16 ನಡುಕ 17 ಅಹಿತ
18 ನರಕ

ರಚನೆ : **ಬೈತಡ್ಕ ಶ್ರೀಧರ,**
ಪುತ್ತೂರು.

ವಂತನೂ, ಬುದ್ಧಿವಂತನೂ ಆಗಬೇಕಿದ್ದಲ್ಲಿ ಶಾರದೆಯ ಅನುಗ್ರಹವಾಗಬೇಕು.

ದುರ್ಗೆ ಶಕ್ತಿ ಮತ್ತು ಸೌಂದರ್ಯಗಳ ಪ್ರತೀಕ. ದೇವಿಯ ವಾಹನ ಸಿಂಹ. ಆಕೆಗೆ ಹತ್ತು ಕೈಗಳು. ಎಲ್ಲ ಕೈಗಳಲ್ಲೂ ಬೇರೆ ಬೇರೆ ಆಯುಧಗಳನ್ನು ಹಿಡಿದಿರುತ್ತಾಳೆ. ಮಹಿಷ [ಕೋಣ] ರೂಪದ ಮಹಿಷಾಸುರನ ದೇಹಕ್ಕೆ ದೇವಿಯ ತ್ರಿಶೂಲ ನಾಟಿರುತ್ತದೆ. ಇದು ರಕ್ಕಸನ ಸಂಹಾರದ ಸಂಕೇತ.

ಮಹಿಷಾಸುರ ಒಬ್ಬ ರಾಕ್ಷಸ. ಇವನು ಭೂಲೋಕದ ಜನರಿಗೂ ದೇವತೆಗಳಿಗೂ ಕಂಟಕಪ್ರಾಯನಾಗಿದ್ದ. ತಾನು ಸಾಯುವುದಾದರೆ ಒಬ್ಬ ಸ್ತ್ರೀಯಿಂದಲಷ್ಟೆ ಎಂಬ ವರವನ್ನು ಬ್ರಹ್ಮನಿಂದ ಪಡೆದಿದ್ದ. ದೇವತೆಗಳು ಬ್ರಹ್ಮನೊಡಗೂಡಿ ಶಿವ ಮತ್ತು ವಿಷ್ಣುವಿನಲ್ಲಿ ಮೊರೆ ಇಟ್ಟರು. ಶಿವ ಮತ್ತು ವಿಷ್ಣು ಇಬ್ಬರೂ ಸಿಟ್ಟಾಗಿ ತಮ್ಮ ತೇಜಸ್ಸು ಶಕ್ತಿಗಳನ್ನು ಧಾರೆ ಎರೆದು ಆದಿಶಕ್ತಿಯನ್ನು ಸೃಷ್ಟಿಸಿದರು. ಆಕೆಯೇ ಪಾರ್ವತಿ, ಗೌರಿ, ಮಂಗಳಾಂಗಿ. ಆ ದೇವಿಗೆ ಆಯುಧಗಳು, ಸಮರಾಸ್ತ್ರಗಳನ್ನು ಕೊಡಲಾಯಿತು. ಅವಳಿಗೊದಗಿದ ಶಕ್ತಿ ಭೂಮ್ಯಾಕಾಶಗಳನ್ನು ಆವರಿಸಿತು. ಆಕೆಗೆ ಸಹಸ್ರ ಬಾಹುಗಳಿದ್ದವು. ಅವಳ ಕೋಪಕ್ಕೆ ಯಾವ ರಾಕ್ಷಸರೂ ಉಳಿಯಲಿಲ್ಲ. ದೇವತೆಗಳು ಆಕೆಯನ್ನು ದುರ್ಗೆ ಎಂದು ಕರೆದರು. ದುರ್ಗೆ ಚಂಡಿ, ಚಾಮುಂಡಿಯಾಗಿ ತನ್ನ ಕರಾಳರೂಪದಿಂದ ಮಹಿಷಾಸುರನ ಮೇಲೆ ಯುದ್ಧಕ್ಕೆ ಬಂದಳು.ಆ ರಕ್ಕಸನು ಸಾಮಾನ್ಯನಲ್ಲ ತನ್ನೆಲ್ಲ ಶಕ್ತಿ ಸಾಮರ್ಥ್ಯಗಳಿಂದ ದುರ್ಗೆಯೊಡನೆ ಹೋರಾಡಿದನು. ಆದರೆ ದೈವಶಕ್ತಿಯ ಮುಂದೆ ದೈತ್ಯಶಕ್ತಿಗೆ ಸೋಲಾಯಿತು. ಚಾಮುಂಡೇಶ್ವರಿಯು ಬೀಸಿದ ಪಾಶ ರಕ್ಕಸನನ್ನು ಬಿಗಿಯಿತು. ಮಹಿಷಾಸುರ ಅಲುಗಾಡದಂತಾಯಿತು. ಮಾಯೆಯಿಂದ ವಿವಿಧ ರೂಪಗಳನ್ನು ತಾಳಿ ಕಾಳಿದೇವಿಯೊಡನೆ ಹೋರಾಡಿದನು. ಕಡೆಗೆ ದುರ್ಗೆ ಹರಿತವಾದ ಖಡ್ಗವನ್ನೆತ್ತಿ ರಾಕ್ಷಸನನ್ನು ಸಂಹರಿಸಿದಳು.

ಹಬ್ಬದಂದು ಹೆಂಗಸರಿಗೆ ಬಿಡುವಿಲ್ಲದಷ್ಟು ಕೆಲಸಗಳಿರುತ್ತವೆ. ಸಂಪ್ರದಾಯದ ಪ್ರಕಾರ ಮಾಡಬೇಕಾದ ಎಲ್ಲ ಸಿಹಿ ತಿಂಡಿಗಳನ್ನು ತಯಾರಿಸುವರು. ಮೂರುದಿನಗಳ ದೇವಿಪೂಜೆಯ ಪ್ರತಿಮೆಯನ್ನು ಪೀಠದಿಂದ ಇಳಿಸಿ ವಿಸರ್ಜನೆಗಾಗಿ ಮೆರವಣಿಗೆಯಲ್ಲಿ ಒಯ್ಯುವರು. ದಾರಿಯುದ್ದಕ್ಕೂ ದೇವಿಯ ಹೆಸರನ್ನು ಹೇಳುತ್ತಾ ಜಯಘೋಷಮಾಡುವರು. ದೇವಿ ಪ್ರತಿಮೆಯನ್ನು ನದಿ, ಸರೋವರದ ನೀರಿನಲ್ಲಿ ಮುಳುಗಿಸುವರು. ಆಗ ಎಲ್ಲರಿಗೂ ಒಂದು ಕ್ಷಣ ಕಣ್ಣು ತೇವಗೊಳ್ಳುವುದು. ಮನ ಮಿಡಿಯುವುದು. ಮನೆಗೆ ಮರಳಿದ ಕೆಲ ದಿನಗಳ ಕಾಲವೂ ಬಂಧು ಮಿತ್ರರನ್ನು ಭೇಟಿ ಮಾಡುವುದು. ಸಿಹಿತಿಂಡಿ ಹಂಚುವುದು ಇದ್ದೇ ಇರುತ್ತದೆ. ದುರ್ಗಾಪೂಜೆ ನಿಮಿತ್ತ ಊರಿನಲ್ಲಿ ನಾಟಕಗಳ ಪ್ರದರ್ಶನ ನಡೆಯುವುದು. ದುರ್ಗಾಷ್ಟಮಿ ಎಲ್ಲ ಜನರನ್ನು ಪರಸ್ಪರ ಹತ್ತಿರ ತರುವ ಹಬ್ಬವಾಗಿದೆ.

ಮೈಸೂರಿನ ಅರಮನೆಯಲ್ಲಿ, ದೇವಾಲಯಗಳಲ್ಲಿ ದೇವಿ ಪೂಜೆ ಸಾಂಗವಾಗಿ ನಡೆಯುತ್ತದೆ. ಮೈಸೂರಿನ ಚಾಮುಂಡಿ ಬೆಟ್ಟದ ಮೇಲಿರುವ ಚಾಮುಂಡೇಶ್ವರಿ ಗುಡಿಯಲ್ಲಿ ವಿಶೇಷ ಪೂಜೆ ಇರುತ್ತದೆ.

ನವರಾತ್ರಿ ಹಬ್ಬದಲ್ಲಿ ಲಕ್ಷ್ಮಿ, ಸರಸ್ವತಿ, ದುರ್ಗೆ ಅಥವಾ ಕಾಳಿ ಪೂಜೆ ಭಾರತದ ಎಲ್ಲೆಡೆಗಳಲ್ಲೂ ಸಾಮಾನ್ಯವಾಗಿ ಇರುತ್ತದೆ. ಶಕ್ತಿದೇವತೆಗಳ ಈ ಪೂಜೆ ಪುರಾಣ ಕಾಲದಿಂದಲೂ ಇದೆ.

ಮಹಾನವಮಿಯಂದು ಉಪಕರಣಗಳ, ಶಸ್ತ್ರಾಸ್ತ್ರಗಳ ಮತ್ತು ವಾಹನಗಳ ಪೂಜೆ ಇರುತ್ತದೆ. ತನ್ನ ಬದುಕಿಗೆ ನೆರವಾಗುವ ಎಲ್ಲ ಸಾಧನಗಳನ್ನು ಮನುಷ್ಯ ಕೃತಜ್ಞತೆಯಿಂದ ಕಾಣುವ ದಿನ. ಈ ಹಬ್ಬವನ್ನು ಆಯುಧ ಪೂಜೆ ಎಂದೂ ಕರೆಯುತ್ತಾರೆ. ಹಿಂದೆ ಅರಸರು ಶಸ್ತ್ರಾಗಾರದ ಆಯುಧಗಳಿಗೆ ಪೂಜೆ ಸಲ್ಲಿಸುವ ಕಾರ್ಯಕ್ರಮ ಇಟ್ಟುಕೊಂಡಿರುತ್ತಿದ್ದರು. ಇಡೀ ದೇಶದಲ್ಲಿ ಮಹಾನವಮಿಯಂದು ಸಡಗರ ಸಂಭ್ರಮಗಳಿಂದ ಆಚರಿಸಲಾಗುತ್ತದೆ. ಕಾರ್ಖಾನೆಗಳು, ವಿದ್ಯುದಾಗಾರಗಳಲ್ಲಿ ಎಲ್ಲ ಯಂತ್ರಗಳನ್ನು ಶುಚಿಗೊಳಿಸಿ ಗಂಧಾಕ್ಷತೆ ಕುಂಕುಮ ಅರಿಶಿನಗಳಿಂದ, ಪುಷ್ಪಗಳಿಂದ ಪೂಜೆ ಮಾಡುವರು. ಸಿಹಿತಿಂಡಿ ಹಂಚಿ ಸಂತೋಷದಿಂದ ಇದ್ದು ಮುಂದಿನ ದಿನಗಳ ಕೆಲಸ ಶುಭವಾಗಿರಲೆಂದು ದೇವರಲ್ಲಿ ಪ್ರಾರ್ಥಿಸುವರು. ವ್ಯಾಪಾರಿಗಳು,

---

[9ನೇ ಪುಟದಿಂದ ಮುಂದುವರೆದುದು]

ನಮ್ಮ ಕೊಡಗು ಸಂಗಾತಿ ಸಂಚಿಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅರೆಭಾಷೆಯ ಲೇಖನಗಳು ಪ್ರಕಟವಾಗಬೇಕು. ಪ್ರತಿಯೊಬ್ಬರೂ ಸಹ ಅರೆಭಾಷೆಯ ಉಳಿವಿಗೆ ಶ್ರಮಿಸಬೇಕು. ಮುಖ್ಯವಾಗಿ ಹಿರಿಯರು ಈ ನಿಟ್ಟಿನಲ್ಲಿ ದಾರಿದೀಪವಾಗಬೇಕು. ಇಂದು ನಾವು ಎಷ್ಟೋ ಮಂದಿ ಹಿರಿಯರು, ವಿಮರ್ಶಕರು, ಮಾರ್ಗದರ್ಶಕರು ಅರೆಭಾಷೆಯನ್ನು ಮರೆತು ಅನ್ಯ ಭಾಷೆಗಳಲ್ಲಿ ವ್ಯವಹರಿಸುವುದನ್ನು ಕಾಣುತ್ತೇವೆ. ಅವರಿಗೆ ಅರೆಭಾಷೆ ಮರೆತುಹೋಗಿದೆಯೋ ಅಥವಾ ಗೊತ್ತಿದ್ದು ಗೊತ್ತಿಲ್ಲದವರಂತೆ ಇರುವರೋ ಅರ್ಥವಾಗುವುದಿಲ್ಲ. ಕೆಲವರಿಗೆ ಅರೆಭಾಷೆಯನ್ನು ಮಾತನಾಡಿದರೆ ನಾವು ಕಾಡುಜನರು ಎಂಬುವ ಭಾವನೆ ಗೋಚರಿಸುವ ಹಾಗೆ ಅನ್ನಿಸುವಂತಿದೆ. ಆದ್ದರಿಂದ ಪ್ರತಿಯೊಬ್ಬರೂ ತೊಟ್ಟಿಲ ಮಗುವಿಗೆ ಅರೆ ಭಾಷೆಯನ್ನು ಕಲಿಸಿದರೆ ಮಾತ್ರ ಅರೆ ಭಾಷೆ ಉಳಿಯಲು ಸಾಧ್ಯ. ಇಲ್ಲವಾದರೆ ಇನ್ನು ಕೆಲವು ವರ್ಷಗಳಲ್ಲಿ ನಾವು ಅರೆಭಾಷೆ ಎಂಬ ಒಂದು ಭಾಷೆ ಇತ್ತು ಎಂದು ಸ್ಮರಿಸಿಕೊಳ್ಳಬೇಕಾಗುತ್ತದೆ.

ದರ್ಜಿಗಳು, ಮುದ್ರಣಾಲಯ ಇಟ್ಟಿರುವವರು ಮೊದಲಾಗಿ ಯಂತ್ರೋಪಕರಣಗಳನ್ನು ಬಳಸುವವರೆಲ್ಲ ಉಪಕರಣ ಸಾಧನಗಳಿಗೆ ಪೂಜೆ ಮಾಡುವರು. ಸರ್ಕಾರಿ ಹಾಗೂ ಖಾಸಗಿ ವಾಹನಗಳಿಗೆ ಸಂಬಂಧಪಟ್ಟವರು ವಿಶೇಷ ಅಲಂಕಾರ ಮಾಡಿ ಪೂಜೆ ಸಲ್ಲಿಸಿ ಒಂದು ಸುತ್ತು ಹೋಗಿಬರುವರು. ಮನೆಗಳಲ್ಲಿ ಕುಟುಂಬದ ಸದಸ್ಯರು ತಾವು ದಿನನಿತ್ಯ ಬಳಸುವ ಕತ್ತರಿ, ಚಾಕು, ಈಳಿಗೆ ಮಣೆ, ಕುಡುಗೋಲು ಮೊದಲಾದ ಉಪಕರಣಗಳಿಗೆ ಪೂಜೆ ಮಾಡುವರು.

ನವರಾತ್ರಿ ದಿನಗಳಲ್ಲಿ ಆಸ್ತಿಕರು ದೇವಿ ಪೂಜೆ, ದೇವಿ ಭಾಗವತ ಪಾರಾಯಣ, ಲಲಿತಾ ಸಹಸ್ರನಾಮ ಮೊದಲಾದವನ್ನು ಶ್ರದ್ಧಾಭಕ್ತಿಗಳಿಂದ ಮಾಡುವರು.

ಆಶ್ವಯುಜ ಮಾಸ ಶುಕ್ಲಪಕ್ಷದ ಹತ್ತನೆಯ ದಿನವೇ ವಿಜಯದಶಮಿ. ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ದುಷ್ಟನಾದ ರಾವಣನನ್ನು ವಧಿಸಿದ ದಿನವೇ 'ವಿಜಯದಶಮಿ' ಎಂದು ಹೇಳುತ್ತಾರೆ. ರಾವಣನು ಶ್ರೀರಾಮನ ಹೆಂಡತಿ ಸೀತೆಯನ್ನು ಅಪಹರಿಸಿ ತನ್ನ ರಾಜ್ಯವಾದ ಲಂಕೆಯಲ್ಲಿ ಅಡಗಿಸಿಟ್ಟಿದ್ದನು. ರಾಮನು ತಮ್ಮ ಲಕ್ಷ್ಮಣ ಹಾಗೂ ವಾನರ ಸೇನೆಯೊಡನೆ ಲಂಕೆಗೆ ಬಂದು ರಾವಣನೊಡನೆ ಯುದ್ಧ ಮಾಡಿ ಅವನನ್ನು ವಧಿಸಿ ಸೀತೆಯನ್ನು ರಕ್ಷಿಸುತ್ತಾನೆ. ಈ ಯುದ್ಧವು ಹತ್ತು ದಿನಗಳ ಕಾಲ ನಡೆಯುತ್ತದೆ. ಒಂಬತ್ತು ದಿನಗಳೂ ರಾಮನು ದುರ್ಗೆಯನ್ನು ಪೂಜಿಸುವನು. ಆತನಿಗೆ ದುರ್ಗೆಯ ಶಕ್ತಿಯಲ್ಲಿ ಅಪಾರ ವಿಶ್ವಾಸವಿರುತ್ತದೆ. ಪಾಂಡವರು ಅಜ್ಞಾತವಾಸ ಮುಗಿದ ನಂತರ ವಿಜಯದಶಮಿಯಂದು ಶಸ್ತ್ರಾಸ್ತ್ರಗಳನ್ನು ಹೊರತೆಗೆದು ಮೊದಲಿನಂತೆ ಬೆಳಗಿದರೆಂದೂ ನಂಬಿಕೆ. ಬಂಗಾಳದಲ್ಲಿ ಈ ದಿನವು ದುರ್ಗಾ ಮಾತೆ ದೈತ್ಯ ಮಹಿಷಾಸುರನನ್ನು ಕೊಂದ ದಿನವೆಂದು ಆಚರಿಸುತ್ತಾರೆ. ಕೆಟ್ಟದರ ಮೇಲೆ ಒಳ್ಳೆಯದರ ಜಯದ ಸಂಕೇತವೇ ವಿಜಯದಶಮಿ.

ದಸರಾ ಹಬ್ಬಕ್ಕೆ ವಿಶ್ವವಿಖ್ಯಾತಿ ಬಂದುದು ಮೈಸೂರಿನ ಅರಸರಿಂದ ಎಂದು ಹೇಳಬಹುದು. ಮೈಸೂರಿನ ರಾಜರು ದಸರ ಹಬ್ಬವನ್ನು ಆಚರಿಸುತ್ತಿದ್ದ ರೀತಿಯಿಂದಾಗಿ ದೇಶವಿದೇಶಗಳ ಜನ ಮೈಸೂರಿಗೆ ದಸರಾ ಉತ್ಸವವನ್ನು ನೋಡಲು ಧಾವಿಸಿ ಬರುವಂತಾಗಿತ್ತು. ಇಂದಿಗೂ ದಸರಾ ಉತ್ಸವವನ್ನು ಮೈಸೂರಿನಲ್ಲಿ ಆಚರಿಸಲಾಗುತ್ತಿದೆ. ನವರಾತ್ರಿ ಕಾಲದಲ್ಲಿ ಮೈಸೂರು ದೇವೇಂದ್ರನ ಅಮರಾವತಿಯಂತೆ ಕಂಗೊಳಿಸುತ್ತದೆ. ಮೈಸೂರು ಅರಸರಿಗೂ ಮೊದಲು ವಿಜಯನಗರದ ಅರಸರು ದಸರಾ ಉತ್ಸವವನ್ನು ಆಚರಿಸುತ್ತಿದ್ದರು. ಅವರ ಕಾಲದಲ್ಲಿಯೇ ನವರಾತ್ರಿ ಉತ್ಸವ ಆಚರಣೆ ಆರಂಭವಾಯಿತೆನ್ನುತ್ತಾರೆ.

ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಮೈಸೂರು ಒಡೆಯರು ನವರಾತ್ರಿ ಉತ್ಸವವನ್ನು ಮುಂದುವರಿಸುತ್ತಾ ಬಂದರು. ಮೈಸೂರಿನ ರಾಜ ಒಡೆಯರ್ ದಸರಾ ಹಬ್ಬಕ್ಕೆ ರಾಜಮರ್ಯಾದೆಯನ್ನು ದೊರಕಿಸಿಕೊಟ್ಟರು. 1799ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಪಟ್ಟಕ್ಕೆ ಬಂದ ಮೇಲೆ ದಸರಾ ಉತ್ಸವವು ಶ್ರೀರಂಗಪಟ್ಟಣದಿಂದ ಮೈಸೂರಿಗೆ ವರ್ಗಾವಣೆಯಾಯಿತು.

ಒಂಬತ್ತು ದಿನಗಳ ಹಬ್ಬದ ನಂತರ ಕೊನೆಯ ದಿನ ಅಂದರೆ ವಿಜಯದಶಮಿಯ ದಿನ ಮೈಸೂರು ಅರಸರು ಜಂಬೂಸವಾರಿಯಲ್ಲಿ (ಆನೆ ಮೇಲೆ ಅಂಬಾರಿಯಲ್ಲಿ ಕುಳಿತು) ದೊಡ್ಡ ಮೆರವಣಿಗೆಯಲ್ಲಿ ಅರಮನೆಯಿಂದ ಶಮೀವೃಕ್ಷದವರೆಗೂ ಹೋಗಿ ಪೂಜೆ ಸಲ್ಲಿಸಿ ಬರುತ್ತಿದ್ದರು. ಈ ಮನಮೋಹಕ ದಸರಾ ಮೆರವಣಿಗೆ ಹಗಲಿನಲ್ಲಿಯೇ ನಡೆಯುತ್ತಿದ್ದಿತು. ಇಂದು ರಾಜಪರಂಪರೆಯ ಆಡಳಿತ ಇಲ್ಲವಾದರೂ ಆನೆಯ ಮೇಲೆ ಚಾಮುಂಡೇಶ್ವರಿ ಪ್ರತಿಮೆಯನ್ನಿರಿಸಿ ಮೆರವಣಿಗೆ ಮಾಡುವ ಪರಿಪಾಠವಿದೆ. ○ —ಸಂಗಾತಿ

## ಭಾರತದ ಸುಂದರಿಯರು

1978–ಅಮರ್‌ಜಿತ್ ಚೌವ್ಹಾನ್
1979–ಸ್ವರೂಪ್ ಸಂಪತ್
1980–ಸಂಗೀತಾ ಬಿಜಲಾನಿ
1982–ಪಮೇಲಾ ಬೋರ್ಡಿಸ್
1984–ಜ್ಯೂಹಿ ಚೌವ್ಲಾ
1985–ಸೋನುವಾಲಿಯಾ
1986–ಮೆಹರ್ ಜೆಸಿಯಾ
1987–ಪ್ರಿಯದರ್ಶಿನಿ ಪ್ರಧಾನ್
1988–ಡೋಲಿಮಿನ್ ಹೌಸ್
1990–ಸಜೌಮಿ ಸೋಬ್ಲಾಕ್
1991–ಕ್ರಿಸ್ಟಿಬುಲ್ ಹೋಲ್
1992–ಮಧು ಸಪ್ರೆ
1993–ನಮ್ರತಾ ಶಿರೋಡ್ಕರ್
1994–ಸುಶ್ಮಿತಾ ಸೇನ್
1995–ಮನ್‌ಪ್ರೀತ್ ಬರ್ಹಾರ್
1996–ಸಂಧ್ಯಾ ಚಿಬ್
1997–ನಫೀಸಾ ಜೋಸೆಫ್
1998–ಡಯಾನ ಹೇಡ್‌ನ್

○ **ಪೊನ್ನಚನ ವಿನುತಾ ಕಾಳಪ್ಪ, ಮಡಿಕೇರಿ**

ನಡೆಸುವುದು ಒಡೆಯರ ಕುಟುಂಬದ ಖಾಸಗಿ ವ್ಯವಸ್ಥೆ. ಈ ಖಾಸಗಿ ದಸರಾ ಆಚರಣೆಗೆ ಇಂದು ಸರ್ಕಾರದಿಂದ ಚರ್ಚೆ ನಡೆಯುತ್ತಿರುವುದು. ಕೇವಲ ರಾಜಕೀಯ ಕಾರಣಗಳಿಗಾಗಿ ವ್ಯಕ್ತಿಯೊಬ್ಬರ ಮೇಲೆ ಹಠ ಸಾಧಿಸುವ ಕಾರಣಗಳಿಂದ ವಿಶ್ವದಾದ್ಯಂತ ನಾಡಿನ ಕಲೆ ಹಾಗೂ ಸಂಸ್ಕೃತಿಯ ಪ್ರತೀಕವಾದ ವೈಭವೋಪೇತ ನಾಡಹಬ್ಬದ ಆಚರಣೆ ಎಂದಿನಂತೆ ನಡೆಸಲು ಬಿಡದೆ ಅಡ್ಡಿ ಮಾಡುತ್ತಿರುವುದು ಎಷ್ಟು ಸಮಂಜಸ ?

ಇವೆಲ್ಲವುಗಳಿಂದ ಅರಸರ ಮನಸ್ಸಿಗೆ ಆಘಾತವುಂಟು ಮಾಡಿ, ಅರಸೊತ್ತಿಗೆಯನ್ನು ಅವರಿರುವವರೆಗೆ ಕಾಯ್ದಿರಿಸಿದ್ದಿದ್ದರೆ ಸಮಾಜ ಸಂಭ್ರಮ ಪಡುತ್ತಿತ್ತೇನೋ ?

ಇತ್ತೀಚಿನ ವರದಿಯಂತೆ ವಾದ ವಿವಾದಗಳಲ್ಲಿ ಹೊಗೆಯಾಡುತ್ತಿದ್ದ ದಸರವನ್ನು ನಿರಾತಂಕವಾಗಿ ನಡೆಸಲು ಸರ್ಕಾರ ಮತ್ತು ಒಡೆಯರವರೊಂದಿಗೆ ಒಪ್ಪಂದವಾಗಿ ಎಂದಿನಂತೆ ಈ ವರ್ಷವು ದಸರ ಮೆರವಣಿಗೆಯೂ ನಡೆಯುವುದೆಂದು ತಿಳಿಸಿರುವುದು ಜನಸಾಮಾನ್ಯರಿಗೆ ಸ್ವಲ್ಪ ಖುಷಿ ತಂದಿದೆ.

ತನ್ನ ಮನಸ್ಸಿಗಾದ ನೋವನ್ನು ಸಹಿಸಿಕೊಂಡು ನಾಡಿನ ಪ್ರಜೆಗಳ ಹಿತದೃಷ್ಟಿಯಿಂದ ಸಂಪ್ರದಾಯ ಬದ್ಧವಾಗಿ ನಡೆಸಿಕೊಡಲು ಒಪ್ಪಿರುವ ಅರಸರ ಒಳ್ಳೆಯತನವನ್ನು ದೇಶಾದ್ಯಂತ ಪ್ರಜೆಗಳು ಮೆಚ್ಚಿಕೊಳ್ಳಲೇಬೇಕಾಗಿದೆ.

○ ಓಡಿಯಂಡ ಝಾನ್ಸಿ, ಮೈಸೂರು.

## ಬೆಂಗಳೂರಿನ ಹೊರವಲಯದಲ್ಲಿ ವರ್ಣರಂಜಿತ ನಾಡು ಕಾವೇರಿನಾಡಿನ ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪ ದಂಪತಿಗಳ ತೃತೀಯ ವೈಯಕ್ತಿಕ ಜನ ಸಂಘಟನೆ

**ಕೈಲ್ ಪೊಳ್ದ್ ಹಬ್ಬ :**

ಒಳ್ಳೆಯ ಕೆಲಸವಾಗಲಿ, ಕೆಟ್ಟ ಕೆಲಸವಾಗಲಿ ಒಬ್ಬರೇ ಮಾಡಬೇಕೆಂದು ಹಿರಿಯರು ಹೇಳಿರುವುದು ಸರಿಯೆನಿಸುತ್ತದೆ. ಕೀರ್ತಿ ಬಂದರೆ ಒಬ್ಬರಿಗೆ, ಅಪಕೀರ್ತಿಬಂದರೂ ಒಬ್ಬನಿಗೆ. ಕಷ್ಟ ಸುಖ ಇವೆರಡನ್ನೂ ಅನುಭವಿಸುವುದು ಒಬ್ಬನೆ. ಅಪವಾದವಿಲ್ಲ, ತುಚ್ಛ ಮಾತುಗಳಿಲ್ಲ, ಹೊಗಳಿಕೆಯ ಮಾತಲ್ಲದೆ ತೆಗಳುವುದಿಲ್ಲ. ಈ ಹೊಗಳಿಕೆಯ ಮಾತುಗಳಿಗೆ ಅರ್ಹ ವ್ಯಕ್ತಿ ನಮ್ಮ ನಿಮ್ಮ ಮನೆ ಮಾತಾಗಿರುವ ಕಾವೇರಿನಾಡಿನ ನಿರ್ಮಾಪಕ, ನಿರ್ದೇಶಕ ಹಾಗೂ ನಾಯಕ ನಟನಾದ ಅಲ್ಲದೆ ಗೌಡಜನಾಂಗದ ಸಂಘಟನೆಯಲ್ಲಿ ತನ್ನನ್ನು ಸಂಪೂರ್ಣ ತೊಡಗಿಸಿಕೊಂಡ ಅಮ್ಮಾಜೀರ ಎಸ್. ಪೊನ್ನಪ್ಪ.

ದಿನಾಂಕ 13-9-1998ರ ಭಾನುವಾರ ಅರೆಭಾಷೆ ಗೌಡರಿಗೆ ಬೆಂಗಳೂರಿನ ಹೊರವಲಯದ ಕಾಡುಕರೇನಹಳ್ಳಿಯ ಕಾವೇರಿನಾಡು ಕೈಲ್ ಪೊಳ್ದ್ ಹಬ್ಬ ಆಚರಿಸಲು ಸಂಪೂರ್ಣ ಸಜ್ಜಾಗಿತ್ತು. ಇಡೀ ಜನಾಂಗಕ್ಕೆ ಆಮಂತ್ರಣ ನೀಡಿ ಬೆಳಗ್ಗೆ ನೆಂಟರನ್ನು ಸ್ವಾಗತಿಸಲು ಕಾವೇರಿನಾಡು ಕಾತುರದಿಂದ ಎದುರು ನೋಡುತ್ತಿತ್ತು. ರಾಷ್ಟ್ರೀಯ ಹೆದಾರಿಯಿಂದ ಕಾವೇರಿನಾಡಿಗೆ ಹೆಜ್ಜೆ ಇಡುತ್ತಿದ್ದಂತೆ 1 ಕಿ.ಮಿ. ದೂರದ ಕಾವೇರಿ ನಾಡಿನಲ್ಲಿ ಹಾಕಿದ ಭರ್ಜರಿ ಚಪ್ಪರ ಗಾಳಿಗೆ ಹಾರಿ ಹಾರಿ ಕುಣಿಯುತ್ತಿದ್ದ ದೃಶ್ಯ ನೆಂಟರನ್ನು ಕೈಬೀಸಿ ಕರೆಯುತ್ತಿದ್ದಂತೆ ಕಂಗೊಳಿಸುತ್ತಿತ್ತು. ಸರ್ವರಿಗೂ ಸಂಭ್ರಮದ ಸ್ವಾಗತ. ಎತ್ತ ನೋಡಿದರತ್ತ ಗೇಂಟೆ ಕಟ್ಟಿ ಸೀರೆ ಉಟ್ಟ ಗೌಡವತಿಯರು, ಸುತ್ತ ನೋಡಿದರೂ ಕುಪ್ಪಸವಟ್ಟೆ ಹಾಕಿದ ಪುರುಷರು. ಇದು ಅಮ್ಮಾಜೀರ ಪೊನ್ನಪ್ಪನವರ 3ನೇ ವರ್ಷದ ಕೈಲ್‌ಪೊಳ್ದ್ ಹಬ್ಬದ ಆಚರಣೆಯ ಸಡಗರದ ವಿಶೇಷವಾಗಿತ್ತು. ಅತಿಥಿಗಳ ಆಗಮನವಾಗುತ್ತಿದ್ದಂತೆ ಸಾಂಸ್ಕೃತಿಕ ಕಾರ್ಯಕ್ರಮ 10-25 ಪೊಕ್ಕುಳಂಡ್ರ ಪೂರ್ಣಯ್ಯ ಸಚಿನ್‌ರವರಿಂದ ಜ್ಯೋತಿ ಬೆಳಗುವುದರೊಂದಿಗೆ ಪ್ರಾರಂಭವಾಯಿತು. ಮೊದಲಿಗೆ ಕುಮಾರಿ ಗೀತಾ ಮೋಂಟಡ್ಕನವರ ಪ್ರಾರ್ಥನೆಯ ನಂತರದ ಕಾರ್ಯಕ್ರಮಗಳು ಒಂದಾದ ಮೇಲೊಂದರಂತೆ ನಡೆದವು. ಮೊದಲಿಗೆ ಕಾವೇರಿನಾಡು ತಂಡದಿಂದ 'ಜ್ಯೋತಿಯ ಬೆಳಗೋಣ, ಕಾವೇರಿ ನಾಡನು ಕಟ್ಟೋಣ' ಎಂಬ ನೃತ್ಯ, ಶ್ರೀಮತಿಯರಾದ ಬೈತಡ್ಕ ಜಾನಕಿ ಮತ್ತು ಬೈತಡ್ಕ ದೇವಮ್ಮನವರಿಂದ 300 ವರ್ಷಗಳ ಹಿಂದೆ ಹಾಡುತ್ತಿದ್ದ ವೆಂಕಟರಮಣ ದೇವರ ಹರಿಸೇವೆ ಹಾಡು, ಆ ಕಾಲ ಲಾಯ್ಕನೇ, ಈ ಕಾಲ ಲಾಯ್ಕನೇ, ಭಾಗಮಂಡಲ ಮಿಲನ್ ತಂಡದ ನೃತ್ಯವಾದರೆ, ಐಕೊಳ ತಂಡದ ಶ್ರೀಮತಿ ಶೀಲಾ ಪೊನ್ನಪ್ಪನವರಿಂದ 'ಗೂಡೆ ಲಾಯ್ಕ ಕಂಡದೆ' ಅರೆಭಾಷೆಯಲ್ಲಿ ಹಾಡು, ಕಾವೇರಿನಾಡು ತಂಡದಿಂದ ಕೋಲಾಟ 'ಸುಗ್ಗಿ ಸುವ್ವಾಲೇ' ಕುಣಿತ ನಂತರ ಮೈಸೂರಿನ ಝಾನ್ಸಿ ತಂಡದಿಂದ 'ಜಾನಪದ ನೃತ್ಯ', 'ಮೂಡಲ್ ಕುಣಿಗಲ್ ಕೆರೆ' ಮೂಡಿಬಂದರೆ ದೇವಜನ ರಾಜು ಬೆಂಗಳೂರಿನವರಿಂದ ಮಿಮಿಕ್ರಿ ಹಾಗೂ ಅರೆಭಾಷೆ ಹಾಡು, ಪುನಃ ಕಾವೇರಿನಾಡು ತಂದಿಂದ 'ನೋಡು ಬಾ ನೋಡುಬಾ ನಮ್ಮೂರ' ನೃತ್ಯ ನೆರವೇರಿದರೆ,ಭಾಗಮಂಡಲದ ಮಿಲನ್ ತಂಡದಿಂದ 'ಇಂದ್ ನಾವು ಸೇರ್‌ದ್ ಗೌಡ ಜನ' ಎಂಬ ನೃತ್ಯ ಮೂಡಿ ಬಂತು. ಐಕೊಳ ತಂಡದಿಂದ ಕೋಲಾಟ ಜನರ ಮನಸ್ಸನ್ನು ಸೂರೆಗೊಂಡರೆ, ಮೂಟೇರ ಕುಮಾರಿ

ಅಂಜಲಿ ಉತ್ತಪ್ಪನವರಿಂದ 'ಅಜ್ಜಯಂದಿರನ್ನು ಜರಿಯುವ ಹಾಡು', ನಂತರದ ನೃತ್ಯ ಓಡಿಯನ ಝೂನ್ಸಿ ತಂಡದಿಂದ 'ಹಬ್ಬ ಹಬ್ಬ ನಾಡ ಹಬ್ಬ'ವಾದರೆ ಕಾವೇರಿ ನಾಡು ತಂಡದಿಂದ 'ನಮ್ಮದ್, ನಮ್ಮದ್' ಎಂಬ ಅರೆಭಾಷೆ ಹಾಡಿಗೆ ನೃತ್ಯ ಜನರ ಹೊಗಳಿಕೆಗೆ ಪಾತ್ರವಾಯಿತು. ಇದರ ಬೆನ್ನ ಹಿಂದೆಯೇ ಮುಂದಿನ ಕಾರ್ಯಕ್ರಮ ಭಾಗಮಂಡಲದ ವಿಲನ್ ತಂಡದಿಂದ 'ಅಜ್ಜಯ ಸಡಗರ' ಮುಗಿಯುತ್ತಿದ್ದಂತೆ ಮುಖ್ಯ ಅತಿಥಿಗಳಾದ ಶ್ರೀ ದೇವಿಪ್ರಸಾದ್‌ರವರಿಂದ ಶುಭಗಳಿಗೆಯಲ್ಲಿ ಕಾವೇರಿ ಗುಡ್ಡದ ಉದ್ಘಾಟನೆ. ಉದ್ಘಾಟನೆ ಮುಗಿಯುತ್ತಿದ್ದಂತೆ ಕಾರ್ಯಕ್ರಮ ಪುನಃ ಪ್ರಾರಂಭ. ಕಾವೇರಿನಾಡು ತಂಡದಿಂದ ನೃತ್ಯ 'ನಮ್ಮೂರ ಸಂಸ್ಕೃತಿ ನಾವ್ಗ್ಹ ಇರಕು', ಕೊನೆಯ ಕಾರ್ಯಕ್ರಮ ಕುಮಾರಿ ಗೀತಾ ಮೋಂಟಡ್ಕರವರಿಂದ ಮಿಮಿಕ್ರಿ ಜನರ ಮನಗೆದ್ದಿತು. ಇಲ್ಲಿಗೆ ಸಾಂಸ್ಕೃತಿಕ ಕಾರ್ಯಕ್ರಮ ಮುಗಿಯುತ್ತಿದ್ದಂತೆ ಮಧ್ಯದಲ್ಲಿ ನಂಗಾರು ಲಿಂಗರಾಜುರವರಿಂದ 'ಗೌಡ ಯುವಕ ಸಂಘ ಬೆಂಗಳೂರು' ಇವರಿಂದ ನಡೆಯಲ್ಪಡುವ ಕಾರ್ಯಕ್ರಮದ ಬಗ್ಗೆ ಗೌಡ ಜನಾಂಗಕ್ಕೆ ವಿವರಣೆ ನೀಡಲ್ಪಟ್ಟಿತ್ತು.

ಸಮಾರಂಭದ ವೇದಿಕೆಗೆ ಅತಿಥಿಗಳನ್ನು ಸ್ವಾಗತಿಸಲು ಸಜ್ಜಾಗಿ ಮೊದಲಿಗೆ ಅಮ್ಮಾಜೀರ ಪೊನ್ನಪ್ಪನವರಿಂದ ದೇವಿ ಪ್ರಸಾದ್‌ರವರನ್ನು ವೇದಿಕೆಗೆ ಕರೆತರಲಾಯಿತು, ಹೀಗೆ ಉಡುದೊಳಿ ಸೋಮಪ್ಪನವರು ಡಿ. ಎಸ್. ಪಿ. ಬೈತಡ್ಕ ಜೋಯಪ್ಪನವರನ್ನು, ಕಲ್ಲುಮುಟ್ಲು ಬಸಪ್ಪನವರು ಎಸ್ಪಿ. ಕುಂಚಡ್ಕ ಉಲ್ಲಾಸರವರನ್ನೂ, ಕಾಚಿಲಂಡ ಅಶೋಕನವರು ದಂಬೆಕೋಡಿ ಆನಂದ [ಜಿ. ಎಂ–ಕೆ.ಎಸ್.ಎಫ್.ಸಿ] ರವರನ್ನು, ಕಟ್ರತನ ರಾಜೇಶ್ ಪಟ್ಟಡ ಪ್ರಭಾಕರ [ಗೌರವ ಸಂಪಾದಕರು ಕೊಡಗು ಸಂಗಾತಿ] ರವರನ್ನು, ನಂಗಾರು ಲಿಂಗರಾಜು ಅವ ಸೀತಾರಾಮ್‌ರವರನ್ನು, ಬಲ್ಯಾಟನ ಪದ್ಮನಾಭ ನಿಡ್ಯಮಲೆ ಪ್ರಕಾಶ್ [ನ್ಯಾಯವಾದಿ]ರವರನ್ನು ವೇದಿಕೆಗೆ ಆದರದಿಂದ ಬರಮಾಡಿಕೊಂಡರು.

ಕಾವೇರಿನಾಡು ಜನ್ಮದಾತ ಅಮ್ಮಾಜೀರ ಪೊನ್ನಪ್ಪನವರು ಕಾವೇರಿನಾಡು ನಡೆದುಬಂದ ದಾರಿಯ ಬಗ್ಗೆ ಆಮಂತ್ರಿತರ ಮನ ಮುಟ್ಟುವಂತೆ ವಿವರಣೆಯನ್ನು ನೀಡಿ ಸಂಸ್ಥೆ ಬೆಳೆಯಲು ಜನಾಂಗದ ಸಹಕಾರ ಕೋರಿದರು. ಅತಿಥಿಗಳಿಂದ ಭಾಷಣದ ಕಾರ್ಯಕ್ರಮ ಮುಗಿಯುತ್ತಿದ್ದಂತೆ ಅತಿಥಿಗಳಿಗೆ ಹಾಗೂ ಕಾವೇರಿನಾಡು ಸಂಸ್ಥೆಗೆ ಸಹಕರಿಸಿದವರಿಗೆ ಕಿರುಕಾಣಿಕೆ ನೀಡಲಾಯಿತು. ವಂದನಾರ್ಪಣೆಯನ್ನು ಉಡುದೊಳಿ ಸೋಮಪ್ಪನವರು ನೆರವೇರಿಸುತ್ತಿದ್ದಂತೆ ಸರ್ವರಿಗೂ ಕೈಲ್‌ಮೂರ್ತ ಊಟದ ವ್ಯವಸ್ಥೆ ಏರ್ಪಾಡಾಗಿತ್ತು. ವ್ಯವಸ್ಥಿತವಾಗಿ ನಡೆದ ಊಟದ ನಂತರ ಕೊಡಗಿನ ಓಲಗ ವ್ಯವಸ್ಥೆಯಿತ್ತು. ಈ ಓಲಗಕ್ಕೆ ಹೆಣ್ಣು ಗಂಡೆನ್ನದೆ ಕುಣಿದು ಕುಪ್ಪಳಿಸಿದರು. ಸಮಯ ಮೀರುತ್ತಿದ್ದಂತೆ ಅಮ್ಮಾಜೀರ ಪೊನ್ನಪ್ಪ ದಂಪತಿಗಳಿಗೆ ಧನ್ಯವಾದ ಹೇಳಿ ತಮ್ಮ ತಮ್ಮ ಮನೆಗಳಿಗೆ, ಊರುಗಳಿಗೆ, ನಾಡ್‌ಗಳಿಗೆ, ತಾವು ಬಂದ ವಾಹನವೇರಿ ಪ್ರಯಾಣ ಬೆಳೆಸಿದ ದೃಶ್ಯ ಅಭೂತಪೂರ್ವವಾಗಿತ್ತು. ಮನೆ ಸೇರುವವರೆಗೆ ಕಾವೇರಿನಾಡು ಸರ್ವನಾದ ಕಣ್ಣುಮುಂದೆ ಇತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

—ಸಂಗಾತಿ ವರದಿ : **ತಡಿಯಪ್ಪನ ಕುಮಾರ ಜಯ.**

## — ನಗೆ ಹನಿ —

ಇಬ್ಬರು ಹುಚ್ಚರು ಮಾತನಾಡುತ್ತಾ,

ಮೊದಲನೆ ಹುಚ್ಚ : ಏ, ಅಲ್ಲಿ ಮಲಗಿರುವವನ ತಲೆ ಕಡಿದು ನಾವು ಅಡಗಿಸಿಡುವಾ ?

ಎರಡನೆ ಹುಚ್ಚ : ಛೇ ! ಯಾಕೆ ಸುಮ್ಮನೆ.

ಮೊದಲನೆಯ ಹುಚ್ಚ : ಅಲ್ಲಾ, ಅವನು ಬೆಳಿಗ್ಗೆ ಎದ್ದು ತನ್ನ ತಲೆ ಹುಡುಕಾಡಲಿ ಅಂತಾ ! !! !!!

—ಯಾಲದಾಳು ಈ ಚಂದ್ರಕಲಾ, ಮಡಿಕೇರಿ.

## ನಿಮಗಿದು ಗೊತ್ತೆ ?

**ಯಾರಿಗೆ ಯಾವಾಗ ಸ್ವಾತಂತ್ರ್ಯ**

| | |
|---|---|
| ಅಮೇರಿಕ | — 1776 |
| ಗ್ರೀಸ್ | — 1828 |
| ಚೀನ | — 1912 |
| ರಷ್ಯಾ | — 1917 |
| ಟರ್ಕಿ | — 1923 |
| ಭಾರತ | — 1947 |
| ಪಾಕಿಸ್ಥಾನ | — 1947 |
| ಬರ್ಮಾ (ಮ್ಯಾನಮಾರ್) | — 1948 |
| ಶ್ರೀಲಂಕ | — 1948 |
| ಸುಡಾನ್ | — 1956 |

—ಮುಳ್ಳನ ಎಸ್. ವಸಂತ್, ಮುಕ್ಕಂದೂರು.

# ನಿಮ್ಮ ಪತ್ರಗಳು

## ನಮ್ಮ ನಮ್ಮಲ್ಲೇಕೆ ಹಗೆತನ

ಮಾನ್ಯರೇ,

ಇಂದು ವಿಶಾಲ ಕೊಡಗು ಸಾಧ್ಯವಿಲ್ಲ. [Greater Coorg] ನಮ್ಮ ವಿಶಾಲ ಕೊಡಗು ಇಂದು 3 ತಾಲ್ಲೂಕಿಗೆ ಸೀಮಿತವಾಗಿರುವುದಕ್ಕೆ ಕಾರಣ ರಾಜಕಾರಣಿಗಳ ಆಳುವ ಅರಸರ [ದೇಶೀಯರೇ ಆಗಲಿ ವಿದೇಶಿಯರೇ ಆಗಲಿ] ವೈಯಕ್ತಿಕ ನಿರ್ಧಾರಕ್ಕೆ ನಾವು ನಮ್ಮನ್ನು ಸೀಮಿತಗೊಳಿಸಿಕೊಂಡಿದ್ದರೂ ಜನ ಜಾಗ್ರತರಾಗಲಿಲ್ಲ. ಜಾಗೃತವಾಗುವ ಸಾಹಸವೂ ಅಂದು ನಮ್ಮಲ್ಲಿರಲಿಲ್ಲ. ಕಾಲ ಬದಲಾಗುತ್ತಿದೆ ಎಂದು ಹೇಳುತ್ತೇವೆ. ಕಾಲ ಬದಲಲ್ಲ. ನಾವು ಬದಲಾಗುತ್ತಿದ್ದೇವೆ. ಹಿಂದೆ ಇದ್ದ ಪ್ರೀತಿ, ಪ್ರೇಮ, ವಾತ್ಸಲ್ಯ ಇಂದು ದೂರವಾಗಿದೆ. ಸ್ವಾರ್ಥ, ಹಿಯ್ಯಾಳಿಕೆ, ಮದ, ಮತ್ಸರವನ್ನು ಬೆಳೆಸಿಕೊಂಡಿದ್ದೇವೆ. ಜನಾಂಗದವರು ತಮ್ಮ ಜನಾಂಗವನ್ನೇ ತಿರಸ್ಕರಿಸುವ ಅಧೋ ಗತಿಗಿಳಿದಿದ್ದಾರೆ. ಕಾರಣ ಒಂದೇ ಸ್ವಾರ್ಥ ಮತ್ತು ಮತ್ಸರ. ಇವೆರಡರಿಂದ ಯಾವ ದೇಶವಾಗಲೀ, ಜನಾಂಗವಾಗಲೀ ಉನ್ನತಿ ಕಂಡಿಲ್ಲ. ಕಾಣುವುದೂ ಇಲ್ಲ. ಇಂದು ನಮಗೆ ಬೇಕಾದದ್ದು ಜನಾಂಗ ನೀತಿಯು ವಿದ್ಯೆ. ಹಂಚಿಕೊಂಡು ತಿನ್ನುವ ವಿದ್ಯೆ. ಕೋಳಿ ತನ್ನ ಮರಿಗಳನ್ನು ಹಾಗೂ ಕಾಗೆ ತಿಂಡಿ ತಿನ್ನುವ ಮೊದಲು ಇತರರನ್ನು ಕರೆಯುತ್ತದೆ. ಮನುಷ್ಯ ಇತರರಿಂದ ಕಿತ್ತು ತಿನ್ನುತ್ತಾನೆ. ನಾವು ಮಾನವರೆಂದು ಮಾನವಿಲ್ಲದೆ ಹೇಳಿಕೊಳ್ಳುತ್ತೇವೆ. ಇದೇ ಪರಿಸರ ನಾಶ, ನಮ್ಮ ನಾಶ.

ಇನ್ನಾದರೂ ಹಿತಚಿಂತಕರು ಮುಂದಾಗಿ ಜನಾಂಗ ಜನಾಂಗವನ್ನು ಬೆಸುಗೆ ಮಾಡುವ ನೀತಿ ಮತ್ತು ಜನಾಂಗದವರು ಹಿಂದುಳಿದವರ ಹಿತ ಚಿಂತನೆ ಮಾಡುವ ರೀತಿಯಲ್ಲಿ ಸುಧಾರಣೆ ಅತ್ಯಾವಶ್ಯಕ. ಮನಸ್ಸು ಪರಿವರ್ತನೆಯಾಗಬೇಕು.

ಕೊಡಗನ್ನು ಭಕ್ಷಿಸಲು ಸಜ್ಜಾಗುತ್ತಿದ್ದಾರೆ. ಇರುವ ಹೊಳೆ, ನಾಲೆಗಳಿಗೆ ಕಟ್ಟೆ, ರೈಲು ಮಾರ್ಗ, ವಿಮಾನ ಮಾರ್ಗ ದಿಂದಾಗಿ ನಾವು ನಡೆಯುವ ಮಾರ್ಗ ಕಾಣದಾಗಿದೆ. ಕೊಡಗು ಕೊರಗುತ್ತಿದೆ.

ವೀರ ತರುಣ ತರುಣಿಯರೇ ಇದರ ವಿಚಾರದಲ್ಲಿ ಚಿಂತಿಸಿ. ಹಿರಿಯರೇ ಒಳ್ಳೆ ಮಾರ್ಗದರ್ಶನ ನೀಡಿ ಮಣ್ಣು, ಗಾಳಿ, ನೀರಿಗೆ ದ್ರೋಹ ಬಗೆಯಬೇಡಿ ಕಾಪಾಡಿ.

—ಚೆಂದ್ರಿಮಾಡ ಗ. ಮುತ್ತಪ್ಪ,
ಕುಶಾಲನಗರ.

## ಅಪಾರ್ಥ ಮಾಡಿಕೊಂಡಿದ್ದಾರೆ

ಮಾನ್ಯರೇ,

ಮಡಿಕೇರಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಸದಸ್ಯನಾಗಿದ್ದ, ಮಡಿಕೇರಿ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷನಾಗಿದ್ದ, ಕರ್ನಾಟಕ ರಾಜ್ಯ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕಿನಲ್ಲಿ ಕೊಡಗನ್ನು ಪ್ರತಿನಿಧಿಸುವ ನಿರ್ದೇಶಕನಾಗಿದ್ದ ನನ್ನನ್ನು ಕನ್ನಡಜಿಲ್ಲೆಯವನೆಂದು ಕರೆದಾಗ ನೋವಾಗುತ್ತಿತ್ತು. ಈಗ ನನ್ನನ್ನು ಕೊಡಗಿನವನೆಂದು ಒಪ್ಪಿಕೊಂಡಿದ್ದೀರಿ. ಎಂದು ಕಾವೇರಿನಾಡು ಕೈಲು ಮುಹೂರ್ತ ಸಮಾರಂಭದಲ್ಲಿ ಹೇಳಿದ್ದು ದಕ್ಷಿಣ ಕನ್ನಡ ಜಿಲ್ಲೆ ಬಂಧುಗಳಿಗೆ ಬೇಸರ ತಂದಿದೆ ಎಂದೊಬ್ಬರು ಬಿಚ್ಚು ಮನಸ್ಸಿನಿಂದ ಹೇಳಿದ್ದು ತುಂಬಾ ಉಪಕಾರವಾಯ್ತು.

ಕೊಡಗಿನವರೆಂದರೆ ಹೆಚ್ಚು ದಕ್ಷಿಣ ಕನ್ನಡ ಜಿಲ್ಲೆಯವನೆಂದರೆ ಕಡಿಮೆ ಎಂಬ ಅರ್ಥ ಮಾಡಿಬರಬಹುದೆಂದು ನನಗೆ ಹೊಳೆದಿರಲಿಲ್ಲ. ನನ್ನನ್ನು ದಕ್ಷಿಣ ಕನ್ನಡ ಜಿಲ್ಲೆಯು ನಮ್ಮವರು ಮಾತ್ರ ಅಲ್ಲ ಎಲ್ಲರೂ ಸ್ವೀಕರಿಸಿದ್ದಾರೆ. ನನ್ನ ಸಿನೇಮ ರಾಜ್ಯ ಪ್ರಶಸ್ತಿಗಳಿಸಿದ್ದು ಇತ್ಯಾದಿ ನನ್ನ ಎಲ್ಲ ಸೇವೆಗಳು ಅಲ್ಲಿ ದಾಖಲಿಸಲ್ಪಟ್ಟಿದೆ. ಇಲ್ಲಿಯ ಕೆಲವರ ಕುಚೋದ್ಯದಿಂದ ನನ್ನ ನೆಲದಲ್ಲಿ ಪರಕೀಯನಾಗಿದ್ದೇನೆ. ಗಡಿಯಲ್ಲಿದ್ದು ಗಡಿಪಾರು ಶಿಕ್ಷೆ ಅನುಭವ ಆಗಾಗ ಆಗುತ್ತದೆ. ದಿ॥ ಮುದ್ದಪ್ಪ, ದಿ॥ ಸೋಮಣ್ಣ, ದಿ॥ ಮಾವಾಜಿ ಜನಾರ್ಧನ, ಪ್ರೊ॥ ಕೋಡಿ ಕುಶಾಲಪ್ಪಗೌಡ ಗಡಿನಾಡಿನ ಗಂಡುಗಲಿಗಳು.

ನನ್ನಪ್ಪ ದಕ್ಷಿಣ ಕನ್ನಡ ಗೌಡ ವಿದ್ಯಾಸಂಘದ ಸ್ಥಾಪಕ ಕಾರ್ಯದರ್ಶಿಯಾಗಿ ನಂತರದ ಮೂವತ್ತು ವರ್ಷ ಅಧ್ಯಕ್ಷರಾಗಿದ್ದರು. ಕೊಡಗು ಸರಕಾರ ರಾಜ್ಯ ಪ್ರಶಸ್ತಿ ನೀಡಿದಾಗ ನಮ್ಮವರು ಅವರನ್ನು ಕೊಡಗಿನವರೆಂದು ಹೆಮ್ಮೆಪಟ್ಟುಕೊಂಡರು. ಹಾಗೆಯೇ ಪ್ರತ್ಯೇಕ ರಾಜ್ಯವಾಗುವುದನ್ನು ವಿರೋಧಿಸಿ ನಿಂತ ನನ್ನನ್ನು ಕೊಡಗಿನವನಲ್ಲವೆಂದು ಹೇಳಿದರೆ ಯಾರೂ ಸಹಿಸುವುದಿಲ್ಲ. ಅಪ್ಪನಂತೆ ನಾನು ಅದೆ ಸಂತಸಕ್ಕೆ ಕಾರಣ.

—ಎನ್. ಎಸ್. ದೇವಿಪ್ರಸಾದ್, ಸಂಪಾಜೆ.

## ಸಂಗಾತಿ

ಓ ನನ್ನ ಮನದ ಸಂಗಾತಿ
ಓ ನನ್ನ ಬಾಳ ಸಂಗಾತಿ
ಓ ನನ್ನ 'ಕೊಡಗು ಸಂಗಾತಿ'.

—ಕುಂದ್ರುಕೋಡಿ ಭಾರತಿ ಸೋಮಯ್ಯ,
ಮಕ್ಕಂದೂರು, ಮಡಿಕೇರಿ.

## ಅರೆ ಭಾಷಿಕ ವಿಭಾಗ

# ಮೋಟೆ ಗೂಡೆನ ಜೊರ

ಇದ್ ಬಾಳ ಹಳೇ ಕತೆ. ಮುಟ್ಲು ಮನೆ ಹಕ್ಕಲೆ ಒಣಚಲ್ (ಮೂರ್ ಕಡೆ ಬಾಣೆ ಇದ್ದ್ ಮಧ್ಯೆಲಿ ಗದ್ದೆ) ಒಂದ್ ಕೆರೆ ಉಟ್ಟು. ಅಲ್ಲಿಗೆ ಮೋಟೆ ಗೂಡೆ ಮಧ್ಯಾನ ಹೊತ್ತಿಗೆ ಬಟ್ಟೆ ಒಗೆಕೆತ ಹೋತಿತ್ತ್. ಅವಳ ತಾಯವ್ವ ಅವ್ಳಿಗೆ ಹೇಳ್ತಿತ್ತ್. ಮಟಮಟ ಮಧ್ಯಾನ ಕೆರೆಹತ್ರ ಹೋಬಡ. ಅಲ್ಲಿ ನಮ್ಮ ಭೂಮಿ ಗುಳಿಗನ ಸಂಚಾರ ಉಟ್ಟು. ಗುಳಿಗನ ಪೆಟ್ಟ್ ಸಿಕ್ಕಿರೆ ಸುಟ್ಟ ಬಾಳೆಯಂಗಾದೆ ಮತ್ತೆ ಯಾರೂ ಬದು ಕುದ್ಲೆ. ಮೋಟೆ ಗೂಡೆ ತಾಯವ್ವನ ಮಾತ್‌ನ ಕೇಳದೆ ಸೊಕ್ಕ್‌ಲಿ ಜುಲ್ಮಿಂದ ಬಟ್ಟೆ ಒಗೆಕೆ ಹೋತ್. ಸ್ವಲ್ಪ ಹೊತ್ತ್‌ಲಿ ಮೋಟೆಗೂಡೆ ನಡ್ಗಿಕಂಡ್ ಮನೆಗೆ ಬಾತ್. ಬಂದದೇ ಕಂಬ್‌ಳಿ ಹೊದ್ದ್ ಮಲ್ಗಿತ್. ಎಷ್ಟ್ ಹೊದ್ದ್‌ಕಂಡ್ರೂ ಸಳಿ ತಡೆಕಾತ್ಲೆ. ತಾಯವ್ವನ ಕರ್ತ್. ತಾಯವ್ವ ಇನ್ನೂ ಎರ್ಡ್ ಕಂಬ್ಳಿನ ಹೊದ್ಸಿದೊ. ಆದ್ರೂ ಸಳಿ ತಡೆಕಾತ್ಲೆ. ತಾಯವ್ವ ಹೋಗಿ ಚಾಂಪನ ಕರ್ದೊ. ಚಾಂಪನೂ ಬಂದೊ. ತಾಯವ್ವ ಹೇಳ್ತ್ "ಈ ಗೂಡೆಗೆ ಹೇಳ್ದೆ ಮಟ ಮಟ ಮಧ್ಯಾನ ಒಣಚ್‌ಲ್ ಕೆರೆಕಡೆ ಹೋಗ್ಬಡ, ಅಲ್ಲಿ ನಮ್ಮ ಗುಳಿಗನ ಸಂಚಾರ ಇದ್ದದೆತ. ಗೂಡೆ ನನ್ನ ಮಾತ್‌ನ ಕೇಳದೆ ಹೋತು. ಈಗ ನೋಡಿ ಏನಾತ್‌ಂತ. ಆಗ ಚಾಂಪ ಹೇಳ್ದೊ, ಅಂದರೆ ಗುಳಿಗಂಗೆ ಕೋಳಿ ಬುಟ್ರೆ ಆದು. ಆ ಕೆಂಪು ಲಾಕಿನ ಹಿಡ್ಕಂಡ್ ಬಾ ತೇಳ್ತ್." ತಾಯವ್ವ ಲಾಕಿನ ಮ್ಯಾಲೆ ನೀರ್ ತಳ್ಕಿಸಿ ತಂದ್ ಬಾಡೆಲಿ ದೀಪ ಇಸಿ ಮನೆವರೆಲ್ಲಾ ಕರ್ದ್ ಗುಳಿಗಂಗೆ ಪ್ರಾರ್ಥನೆ ಮಾಡಿ ಮೋಟೆ ಗೂಡೆನ ಜೊರ ಬುಟ್ರೆ ಕೋಳಿ ಕೊಟ್ಟವೆಂತೇಳಿಕಂಡೊ.

ಆದ್ರೂ ಮೋಟೆ ಗೂಡೆಗೆ ನಡ್ಗುದು ಕಮ್ಮಿ ಆತ್ಲೆ. ಗೂಡೆನ ಅಪ್ಪ ಗಣಪತಿ ಹೇಳ್ದೊ, ನಾನೊಂದು ಸಲ ನಮ್ಮ ಹಾರ ವನ ಹಕ್ಕಲೆ ಹೋಗಿ ಸೊಲ್ಪ ಭಸ್ಮ ತನ್ನಿಂ ತೇಳಿ ಓಡ್ದೊ. ಗಣಪತಿ ಭಸ್ಮ ತಂದ್ ಹಾಕಿದೊ. ಆದ್ರೂ ಗೂಡೆ ನಡ್ಗುದ್‌ಕಮ್ಮಿ ಆತ್ಲೆ. ಅಷ್ಟೊತ್ತಿಗೆ ಅಲ್ಲಿಗೆ ಆಚೆಮನೆ ಸೋಂಪಜ್ಜ ಬಂದವು ಹೇಳ್ದೊ, ಇದೆಲ್ಲಾ ಆಕಿಲೆ, ನೀವು ಉಡೋತ್ತಿಗೆ ಹೋಗಿ, ಅಲ್ಲಿ ಈಗಾಗಿ ಒಬ್ಬ ಕಣಿಯ ಬಂದುಟ್ಟು. ಅಂವ ಬಾಳ ಮಂತ್ರ ಕಲ್ತುಟು. ಅವನ ಕರ್ಕಂಡ್ ಬಂದರಾದುತೇಳಿ ಅವರ ಮನೆ ಕುಶಾಲಪ್ಪನ ಅಲ್ಲಿಗೆ ಕಳ್ಸಿ ಕರ್ಸಿದೊ. ಆ ಕಣಿಯ ರಾಶಿ ಮಡ್ಗಿ ಹೇಳ್ತ್, ಇದ್ ಗುಳಿಗನ ಕಾಟ ಅಲ್ಲ ಅದ್ ನಿಮಿಗೆ ಆಗದವು ಬೆಟ್ಟಚಿಕ್ಕಿಗೆ ಹರ್ಕೆ ಹೊತ್ತೊಳೊ ಅಲ್ಲದೆ ನಿಮ್ಮ ಮನೆಲಿ ಹಿಂದೆ ಸತ್ತಿದ್ದ ಹೆಂಗ್ಸಿನ ಪೀಡೆನೂ ಸೊಂಕಿಟ್ಟು. ಅದ್ಕೆಲ್ಲಾ ನೀವು ಛಿದ್ರಹೋಮ ಹಾಕ್ಸಕು. ಅದ್ಕೆ ಐದ್ ಸೇರ್ ಅಕ್ಕಿ, ಎರ್ಡ್ ಪಡ ಬಾಳೆ ಹಣ್ಣ್, ಒಂದ್ ಕೋಳಿ, ಐದ್ ತೆಂಗಿನಕಾಯಿ, ಮೂರು ಸುಡಿ ವೀಳ್ಯದೆಲೆ, ಹತ್ತ್ ಅಡಿಕೆ, ಹನ್ನೊಂದು ಮೊಳದ ಹೊಸ ಬಿಳಿ ಬಟ್ಟೆ, ಅರಸಿನ–ಕುಂಕುಮ, ಊದುಬತ್ತಿ ಐದ್ ಪ್ಯಾಕ್, ಕಳ್ಳ್ ಒಂದ್ ಕುಪ್ಪಿ, ಕುರ್ದಿ ನೀರ್ ಮಾಡಿ, ಒಂದ್ ಮಡಿಕೆ, ಒಂದ್ ಬಿಂದಿಗೆ, ನೂಲು ಬೇಕು ತ್ತೇಳಿ ಪಟ್ಟೆ ಮಾಡ್ಸಿ 2000ರೂ. ಅವಂಗೆ ಕೊಡೊಕುತೇಳಿ ಎಲ್ಲಾ ತಯಾರ್ ಮಾಡ್ನೊತೇಳ್ಯಾಕನ ಗೂಡೆನ ಅಣ್ಣ ಗೋಪಾಲಂಗೆ ಮಡಿಕೇರಿ ಕಾಲೇಜಿಗೆ ಹೋದಂವ ಬಂದ್ ಏನಾತ್‌ಂತ ಕೇಳ್ತ್ ತಾಯವ್ವ ಮರ್ಟ್‌ಕಂಡ್ ಇದ್ದದೆಲ್ಲಾ ನಡ್ದಂಗೆ ಹೇಳ್ತ್.

ಆಗ ಗೋಪಾಲಂಗೆ ಗ್ಯಾನ ಆತ್. ಅವನ ಕಾಲೇಜ್‌ಲಿ ಮಲೇರಿಯಾ ವಿಷಯ ಹೆಲ್ತ್ ಡಿಪಾರ್ಟ್‌ಮೆಂಟ್‌ನವು ಮಲೇರಿಯಾ ಸೊಳ್ಳೆಗ ಎಷ್ಟೆಷ್ಟು ತರಲಿ ಒಳೊ, ಎಂತೆಂತಾ ಸೊಳ್ಳೆಗ ಎಷ್ಟೆಷ್ಟೇ ಕೇಡ್ ಮಾಡುವಂತೆಲ್ಲಾ ಹೇಳಿದ್ದೊ. ಇದರ್ನ ಗ್ಯಾನ ಮಾಡಿ ಮನೆಯವುಕೂ, ತಾಯವ್ವಂಗೂ ಸೇರ್ಸಿ ಇದ್‌ಗುಳಿಗನಕಾಟ, ಪೀಡೆ ಕಾಟ ಅಥವಾ ಮಾಟ ಛಿದ್ರದ ಕಾಟ ಅಲ್ಲಾ, ನಾನ್ ಹೋಗಿ ಜೀಪ್ ತಕಂಡ್ ಬನ್ನೆ, ಮೋಟೆ ಗೂಡೆಗೆ ಬಟ್ಟೆ ಬದಲಿಸಿ ತಯಾರಾಗಿರಿಂತೇಳಿ ಅವನ ಬೈಕ್‌ಲಿ ಮಡಿಕೇರಿಗೆ ಹೊರಟ್ ಮುಕ್ಕಾಲ್ ಗಂಟೆಯೊಳಗೆ ಜೀಪ್‌ನ ಬಾಡಿಗೆಗೆ ತಂದ್ ನಿಲ್ಸಿತ್. ತಾಯವ್ವ, ಅಮ್ಮ ಮತ್ತೆ ಆಚಮನೆ ಸಣ್ಣವ್ವನೊಟ್ಟಿಗೆ ಮೋಟೆ ಗೂಡೆನ ಕೂರ್ಸಿ ಕಂಡ್ ಗೂಡೆನ ಅಣ್ಣ ಗೋಪಾಲ ಅವಂಗೆ ಪರಿಚಯ ಇರುವ ಡಾ॥ ರುದ್ರಪ್ಪನಲ್ಲಿಗೆ ಹೋಗಿ ಅಲ್ಲಿ ಎಲ್ಲಾ ಪರೀಕ್ಷೆ ಮಾಡ್ಸಿ ಕಾಕನ ಅದ್ ಯಂ. ಟಿ. ಮಲೇರಿಯಾಂತ ಗೊತ್ತಾಗಿ ಇಂಜಕ್ಷನ್, ಕೆಲವು ಗುಳಿಗೆಗಳ ಕೊಟ್ಟ ಡಾಕ್ಟರ್ ಹೇಳ್ತ್, ನೀವು ಇನ್ನು ಅರ್ಧಗಂಟೆ ತಡ ಮಾಡಿದ್ದರೆ ನಿಮಗೆ ಮೋಟೆ ಗೂಡೆ ಬದ್‌ಕಿ ಸಿಕ್‌ತಿತ್ತ್‌ಲೆ. ಈಗಳೇ ಇಲ್ಲಿಗೆ ಕರ್ಕಂಡ್ ಬಂದದ್ ಒಳ್ಳೇದಾತ್. ಈ ಜೋರ ಬಂದ್ 12 ಗಂಟೆ ಒಳಗೆ ಮೊದ್ದು ಮಾಡದಿದ್ದರೆ 48 ಗಂಟೆ ಒಳ್ಗೆ ರೋಗಿ ಸತ್ತೋದವೆಂತ ಹೇಳ್ತ್. ಮೋಟೆ ಗೂಡೆನ ಅಣ್ಣ ಗೋಪಾಲಮನಿ ಅಲ್ಲಿಗೆ ಬಾರದಿದ್ದಿದ್ದರೆ, ದೊಡ್ಡವು ಎಲ್ಲಾ ಸೇರಿ ಇನ್ನೆಷ್ಟ್ ದೈವ್ವ ದೇವರಿಗೆ ಹರಿಕೆ ಹೊರುತ್ತಿದ್ದೊ ಅಲ್ಲದೆ ಕಣಿಯ, ತಾತಿ, ತಗ್‌ಡ್, ಹೋಮ, ಮಂತ್ರತ್ತೇಳಿ ಕಮ್ಮಿ ತೇಳ್ರೆ 3000 ರೂಪಾಯಿನ ಖರ್ಚ್ ಮಾಡ್ಸಿತ್ತಿತ್. ಕಡೆಗೆ ಮೋಟೆ ಗೂಡೆನೂ ಸತ್ತೋತಿತ್. ಮನೆವು ದುಡ್ಡುನೂ ಇಲ್ಲದೆ ಸಾಲ ಗೀಲ ಮಾಡಿಯಾದ್ರು ಖರ್ಚಾಗ್ತಿತ್ತ್. ಇದ್‌ಕೇ ಹೆಳ್ದು ಗೋಪಾಲನಂತ ಒಬ್ಬನಾರ್ ವಿದ್ಯೆ ಕಲ್ತಂವ ಇರಕು ಮೂಢ ನಂಬಿಕೆಂದ ಜನ ಎಷ್ಟ್ ಕಷ್ಟಪಟ್ಟವೆಂತ

—ಪ್ರೊ॥ ಪೂಜಾರಿ ಮೊಣ್ಣಪ್ಪ,
ಬೆಂಗಳೂರು.

## ಬೇಸಾಯು

ಬೆಳ್ಳಿ ಮೂಡಿ ಬೊಳ್ಪು ಆಕನ
ಹಂಗೇ ಆಲ್ಸಿದ ಕೆಬಿ ಕೊಡ್ಕನ
ಕೇಳ್ದೆ ಮಾರಾಯ್ತಿ ದನಿ ಕೊಡ್ದು
ಬೈತ್‌ನ ಪುಡೆಂದ ಪೊರ್ಲ್ಲಲಿ ಕೇಳ್ದೆ.

ಬೊಳ್ಪಾಪ್ತ್‌ಂತ ಬೆಳ್ಳಿ ಕೋಳಿಗೆ ಕೂಂಗ್‌ಕನ
ಮಜನ ಎದ್ರಿಸಿ ಗೌಡ್ರು ಹೇಳ್ದೊ
ಚಿಮಿಣಿ ದೀಪ ಇತ್ತ್‌ಕೆ ತಕ
ಕಾಫಿ ಆಗಿರೊಕು ಹೊಯ್ಕಂಡ್ ತಾ

ಕಾರಿ ಎತ್ತ್ ಮುಂದೆ ಗೆಂಡೆ ಎತ್ತ್ ಹಿಂದೆ
ನೊಜ ನೇಗಿಲ್ ಹೆಗ್‌ಲಲಿ ಇಟ್ಟೊ
ಅಪ್ಪನು ಮಜನು ಹೂಡಿಕೆ ಹೊರ್‍ಟೊ
ದಂಡಿಗೆ ಹೊರ್‍ಡುವ ವೀರರ ಹಂಗೆ.

ಹೆಣ್ಣ್ ಭತ್ತ ಮಿದ್ದದೆ, ಮಗ ಅಕ್ಕಿ ಕಡ್ದದೆ
ಸೊಪ್ಪು ಹುಲ್ಲು ಆಕೊಲ್ಲೆ ಸೌದೆ ಹಣತರ ಕೊಲ್ಲೆ
ಹನಿತ್ ಅಕ್ಕಿ ಬೀಸಿಕೆ ಉಟ್ಟು, ಒಮ್ಮೆ ಭತ್ತ ಬೇಯ್ಸಿಕೆ ಉಟ್ಟು
ಗದ್ದೆ ಗೋರಿ ನಾಳೆಗೆ ಉಟ್ಟು ಹಣ ಜನಕೆ ಹೇಳಿಕೆ ಉಟ್ಟು

ಬೈಲಿಗೆ ಹೋದರೆ ನೇಜಿನ ಪೊರ್ಲ್ಲು
ಕಂಜ ತರಿಯಕನ ಕಾಫಿನ ಮೊರ್ಲ್ಲು
ಪುಣಿಗೆ ಮೆತ್ತಿದ ಚೋಳುನು ಜಾರ್ದು
ಹಲ್ಲೆ ಮೆಟ್ಟ್‌ಕನ ಒಮ್ಮೊಮ್ಮೆ ಬೀಳ್ದು.

ಬೇಸಾಯು ಅಂದರೆ ಬೇಗಸಾಯು
ಹೀಂಗೆಂತ ಎಲ್ಲವ್ಕೂ ಗೊತ್ತಾಗುಟ್ಟು
ಕರ್‍ಪರೆ ಬರುವ ಜನ ಎಲ್ಲಿಟ್ಟು
ಹಾಂಗೇಂತ ಬೈಲೆಲ್ಲ ತೋಟ ಆಗುಟ್ಟು.

ಅದೆಲ್ಲ ಕಳ್ತಲೆ ಅಂದ್‌ನ ಕಾಲ
ಹೆಂಗುಟ್ಟು ನೋಡಿ ಇಂದ್‌ನ ಕಾಲ
ಹೊತ್ತು ಏರ್‍ದ ಮೇಲೆ ಹಾಸಿಗೆಂದ ಏಳ್ದು
ಕಂತುವ ಸೂರ್ಯನ ನೋಡಿಕೆ ಹೋದು.

ಪೇಟೆಗೆ ಹೋದರೆ ಅಕ್ಕಿನು ಉಟ್ಟು
ದುಡ್ಡಿದ್ದರೆ ಲೋಕಲಿ ಎಲ್ಲನು ಉಟ್ಟು
ಕಷ್ಟ ಬಾಕೆ ಈಗ ಇಷ್ಟ ಯಾರಿಗುಟ್ಟು
ಲೋಕ ಎಲ್ಲ ಬಾರಿ ಸುಖನೇ ಉಟ್ಟು.

ಹಿಂದೆನ ಕಾಲದ್ ನೆನ್ಪಿಗೆ ಬಂದದೆ
ಅದಾ ಎತ್ತ್‌ಗೆ ದನಿ ಕೊಡ್ದು
ನೀವ್ಗೆ ಕೆಳ್ದೆನೋ–ಓ ಹೋ ಹೊಯ್
ಓ ಬೇಲಿಲೇನೋ, ಗೋವಿಂದ ಬದನೆ ಪದಗ.

—ನಿಡ್ಯಮಲೆ ವೇದಾವತಿ ಅನಂತ.

## ಚಾಂಪನ ಭಜನೆ

ಕತ್ತಲೆ ಹೊತ್ತಿಗೆ ನಮ್ಮ ಚಾಂಪನ
ಭಜನೆ ಪೊರ್ಲ್ಲನ ಕೆಮಿ ಕೊಟ್ಟು ಕೇಳಿ:
ದೀಪದ ಮುಂದೆ ಕೈ ಮುಗ್‌ದ್
ಹಣೆ ಮ್ಯಾಲೆ ವಿಭೂತಿ ಬರೆ ಎಳ್‌ದ್
ಕಣ್ಣ್‌ನ ಮುಚ್ಚಿ ಕಾಲ್‌ನ ಮಡ್‌ಚಿ
ರಾಗಕೆ ಸರಿಆಗಿ ತಾಳ ಹಾಕಂಡ್
ಕಾಯಿನ ಒಡ್‌ದ್ ಬಾಳೆಲೆಲಿಟ್ಟ್
ಹಣ್ಣ್‌ನ ಸುಲ್‌ದ್ ಜೊತೇಲಿ ಇಟ್ಟ್
ಚಾಂಪನ ಭಜನೆ ಶುರ್ ಆಗ್‌ತಿತ್ತ್.
ಸುತ್ತ ಕುದ್ದ ಪಿಳ್ಳೆಕ ಗಿಳ್ಳೆಕ
ಒಬ್ಬನ ಒಬ್ಬ ಅಂಡ್‌ಸಿ ಅಂಡ್‌ಸಿ
ಕಿಸಿಕಿಸಿ, ಪಿಸಿಪಿಸಿ ಮಾಡ್‌ತ ಇದ್ದೊ
ಒಳಗೆ ಚಾಮೆವ್ವನ ಒಗ್ಗರಣೆ ಸದ್ದ್‌ಗೆ
ಚಾಂಪನ ಸದ್ದ್ ನಿತ್ತೇ ಹೋತ್
ಚಾಮೆವ್ವನ ಕರ್‌ದ್ ಕೆಮಿ ಹತ್ರ ಕೇಳ್ದೊ
'ಯೇ ಗಂಗಾ, ಕುಜ್ಜೆ ಗೈಪು ಆತಾ ?'
ಚಾಮೆವ್ವ ಜವಾಜು ಹೇಳಿಕೆ ಮುಂದೆ
ಭಜನೆಗೆ ಮಂಗಳ ಹಾಡ್ಯಾತ್
ಅಡಿಗೆ ಮನೆಗೆ ನೆಟ್ಟನೆ ನುಗ್ಯಾತ್
ಮಣೆ ಮ್ಯಾಲೆ ಕುದ್ದ್ ಮುಕ್ಕಾಲ್ ಎಳ್ದ್
ಮುಕ್ಕಾಲ್ ತಲೆಗೆ ಅಡ್ಡಕೆ ಉದ್ದಕೆ
ತರಕಿಟ, ತರಕಿಟ ತಟ್ಟ್‌ತ ಇದ್ದೊ.

—ಕುಲ್ಲಚನ ಕಾರ್ಯಪ್ಪ,
ಕುಂಬಳದಾಳ್ ಗ್ರಾಮ.

## ಧಾರವಾಹಿ-13

ಮೂಲಕಥೆ : ಅಶ್ವಿಥಿ ಅರವಿಂದ್
ಅರೆಭಾಷೆಗೆ : ಎಂ.ಇ. ಮುಹಮ್ಮದ್

# ಕರಿ ಚಿನ್ನ

'ಅಣ್ಣ ಎಲ್ಲಿ ಉಟ್ಟು ?'

ಜೀವನ್ ಕೇಳ್ತ್. ಅವಂಗೆ ರಂಜನ್‌ನ ಕಾಂಬಕೆ ಆತುರ.

'ಬ್ಯಾಟೆಗೆ ಹೋಗಿ ಬನ್ನೇಂತ ಮಧ್ಯಾಹ್ನ ಮನೆಂದ ಹೊರ್ಟ್ ಹೋಗೊಳೊ'

ಅವನ ಬ್ಯಾಟೆ ಈಗೀಗ ಯಾಕೋ ಸೊಲ್ಪ ಹೆಚ್ಚಿಗೆ ಆಗ್ತಾ ಉಟ್ಟು.

'ರಂಜು ಸಾರ್‌ಗೆ ಲಾಯ್ಕ ಗುರಿ ಮೊಡ್ಗಿಕೆ ಗೊತ್ತುಟಲ್ಲಾ ! ಅವು ಒಂದ್ ತೋಟನೂ ಹಾಳ್ ಮಾಡ್ದುಲೆ'

ಕಾಳ ನೆಗಾಡಿಕಂಡೇ ಹೇಳ್ತ್.

ಹತ್ತ್ ನಿಮಿಷ ಕಳ್ದ್ ಐ.ಜಿ.ದ್ ಮಜ ದೇವಯ್ಯನ ಚೇಂಬರ್‌ಂದ ಹೊರಗೆ ಬಾತ್. ಜೀವನ್ ತಕ್ಷಣ ಚೇಂಬರ್‌ಗೆ ನುಗ್ಗಿತ್.

'ಏನಾ, ಇಂದ್ ಕ್ಲಾಸ್ ಇಲ್ಲ್ಯಾ ನಿಂಗೆ ?'

'ಕ್ಲಾಸ್ ಇತ್ತ್, ನಿನ್ನ ಕಂಡ್ ಪೋಯಿಂತ ಬಂದೊಳೆ'

'ಇದೇನಾ ನಿಂಗೆ ಇದ್ದಕ್ಕಿದ್ದಂಗೆ ನನ್ನ ಮೇಲೆ ಅಷ್ಟೊಂದ್ ಪ್ರೀತಿ ಹುಟ್ಟಿ ಬುಟ್ಟದ್ ?'

'ಅಣ್ಣನ ಇಸ್ಯ ಮಾತಾಡಿಕೆ'

'ಹ್ಞಾಂ ಅವಂಗೆ ಏನಾತ್ ?'

'ಆ ಫ್ಯಾಕ್ಟ್ ಮಾದಯ್ಯ ಇಂದ್ ಕಾಲೇಜಿಗೆ ಬಂದಿತ್ತ್.'

'ಹ್ಞಾಂ...ಆ ಬೊಡ್ಡಿ ಮಜ ಅಲ್ಲಿಗೂ ಬಾತಾ ?'

'ನಾಡ್‌ಕೊಲ್ಲಿ ಮಾದಪ್ಪನ ಮಗ್ಳು ಗೌರನ ಅಣ್ಣ ಕೆಡ್ಸಿಟ್ಟು ಗಡ. ಈಗ ಅವನೇ ಮೊದ್ವೆ ಮಾಡಿಕಣಕು ಗಡ'

'ಅಂಪ ಹೇಳ್‌ದರ್ನ ಕೇಳಿಕಂಡ್ ನಿತ್ತ್ ಬುಟ್ಯಾ ? ನಿನ್ನ ಫ್ರೆಂಡ್ಸ್‌ಗಳಿಗೆ ಹೇಳಿ ಅವನ ಮೊಕಕ್ಕೆ ನಾಕ್ ಮುಡ್ಗಕಾಯ್ತ್. ನಮ್ಮ ರಂಜು ಯಾರ್ನ ಮೊದ್ವೆ ಮಾಡಿ ಕಣಕುತ ತೀರ್ಮಾನ ಮಾಡೊಂವ ನಾನ್. ಡೌರಿ ಕೊಡಿಕೆ ಆ ಮಾದಪ್ಪನಕ್ಕಲೆ ದುಡ್ಡು ಇಲ್ದೆ ಹೋದ್ರೆ ಅವನ ಮಗ್ಳುನ ಕಲ್ಲ್‌ಕಟ್ಟಿ ಬಾವಿಗೆ ಹಾಕ್ಲಿ.'

'ಹಂಗೆಲ್ಲ ಮಾತಾಡಿಕೆ ಬೊತ್ತ್‌ಡ್ಯಾಡಿ, ಅದ್ ಸೆರಿಯಲ್ಲ.

ದಾಟ್, ಹ್‌ಂ...ಬ್ಯಾಗ...'

ದೇವಯ್ಯ ಮಜನ ನುಂಗೊ ತರ ನೋಡ್ತ್.

'ಈ ಮೊದ್ವೆ ನಡಿಯುದೇ ಹೋದ್ರೆ ಇಡೀ ಊರ್ ಕೇರಿನವು ನಾಸ್ಗೆ ತಿರ್ಗಿ ಬಿದ್ದವೆ. ಆ ಫ್ಯಾಕ್ಟ್ ಮಾದಯ್ಯ ಅನ್ಯಾಯಕೆ ಹೋಗೊಂವ ಅಲ್ಲ. ಹೇಸಿಗೆ ಅದ್ರೆ ನಂಗೂ ಕಾಲೇಜ್‌ಲಿ ತಲೆ ಎತ್ತಿ ನಡಿಯಕೆ ಬೊತ್ತ್ ನೋಡಿ...'

'ನಿಂಗೆ ತಲೆ ಎತ್ತಿ ನಡೀಕೆ ಆಗದೋದ್ರೆ ನೀನ್ ಕಾಲ್ ಎತ್ತಿಕಂಡ್ ನಡೀರಾ,

---

ಕಳ್ದ ಸಂಚಿಕೇಲಿ ...

ರಂಜನ್‌ನೊಟ್ಟಿಗೆ ಲಾಡ್ಜ್‌ಲಿ ಜಗಳ ಮಾಡ್ದ ಮಾದಯ್ಯ ಸೀದಾ ರಂಜನ್‌ನ ತಮ್ಮ ಜೀವನ್ ಓದುತ್ತಿರುವ ಕಾಲೇಜಿಗೆ ಹೋಗಿ ಜೀವನ್‌ಗೆ ಈ ವಿಷ್ಯ ತಿಳಿಸಿತ್. ಡ್ಯಾಡಿ ಮತ್ತೆ ಅಣ್ಣನೊಟ್ಟಿಗೆ ಈ ವಿಷ್ಯ ಮಾತಾಡ್ನೆ ತೇಳಿ ಮಾದಯ್ಯನ ಕಳ್ಸಿದೆ. ಇತ್ತ ರಂಜನ್ ಮನೆಗೆ ಬಂದಂಗೆ ದೇವಯ್ಯ ಮಜಂಗೆ ಹೆದ್ರಿಸಿ ಇನ್ನ್ ಮುಂದೆ ಗೌರನ ಮೊಕ ನೋಡಿಕೆ ಬೊತ್ತ್ ತೇಳಿ ಇಬ್ಬರ ಮನೆಗೆ ಮಧ್ಯ ದೊಡ್ಡ ಕಾಂಪೌಂಡ್ ಗೋಡೆ ಕಟ್ಟಿಸಿದೆ. ಆಗ ಈ ವಿಷ್ಯ ಹೇಳಿಕೆತ ಜೀವನ್ ಮನೆಗೆ ಬಂದದೆ.

ಮುಂದೆ ಓದಿ............

---

'ಓಹೋ ! ನಂಗೆ ಸೆರಿ ತಪ್ಪುನ ಹೇಳಿ ಕೊಡಿಕೆ ನೀನೀಗ ಕಾಲೇಜಿಂದ ಓಡಿ ಬಂದದಾ ?'

ದೇವಯ್ಯಂಗೆ ಸಿಟ್ಟ್‌ಬಾತ್.

ಅಣ್ಣ ಆ ಗೌರನ ಮೊದ್ವೆ ಮಾಡಿಕಣದಿದ್ರೆ ಆ ಫ್ಯಾಕ್ಟ್ ಮಾದಯ್ಯ ಜನ ಸೇರ್ಸಿ ಬುಟ್ಟ್ ನಮ್ಮ ಮನೆ ಮುಂದೆ ಸ್ಟ್ರೈಕ್ ಮಾಡ್ವ ಚಾನ್ಸ್ ಉಟ್ಟು ಡ್ಯಾಡಿ. ನಮ್ಮ ಎಲ್ಲಾ ಬಸ್‌ಗಳ ತಡ್ದ್ ನಿಲ್ಸಿವೆ. ಮತ್ತೆ ಅದ್ ಒಂದ್ ದೊಡ್ಡ ಹೇಸಿಗೆ ಆದೆ ನೋಡಿ. ಇದ್‌ರ್ನೆಲ್ಲ ಗ್ಯಾನ ಮಾಡಿ ನಾವ್ ಹೆಜ್ಜೆ ಹಾಕೊಕು.

'ಶಟ್ ಅಫ್, ಈ ವಿಚಾರಲಿ ನೀನ್ ನಂಗೆ ಬುದ್ಧಿ ಹೇಳಿಕೆ ಬಾದ್ ಬ್ಯಾಡ. ಮರ್ಯಾದೆಂದ ನನ್ನ ಕಣ್ಣ್ ಮುಂದೆಂದ ನನ್ನ ಹಣ ಖರ್ಚ್ ಮಾಡಿಬುಟ್ಟ್ ಕಾಲೇಜಿಗೆ ಹೋಗ್ತಾ ಇರ್ದು ಅಲ್ದೆ ನಂಗೇ ತಿರ್ಗಿ ನಿಲ್ತಾ ಒಳ ನೀನ್ ?'

ಜೀವನ್‌ಗೆ ಮಾತ್ ಬೆಳ್ಸಿಕೆ ಇಷ್ಟಾತ್‌ಲೆ.

* * *

ಮಾರಣೆ ದಿನ ಬೆಳಿಗ್ಗೆ ಮನೆ ಆಳ್ ಕುಟ್ಟಿ ಓಡಿ ಬಂದ್ ಬುಟ್ಟ್ ಎಲ್ಲಾರ್ನ ಕರ್ತ್.

'ಬೇಗ ಬನ್ನಿ ಬೇಗ...ಪೊಲೀಸ್‌ಗೆ ಫೋನ್ ಮಾಡಿ...'

'ಏಯ್ ಯಾರ್ ಸತ್ತ್‌ದ್‌ಂತ ಹಂಗೆ ಕಿರ್‌ಚ್ತಾ ಒಳರಾ, ನಾಲಾಯಕ್ ?'

ದೇವಯ್ಯ ಕೇಳ್ತ್

ಎಲ್ಲವೂ ಬಂದ್‌ಬುಟ್ಟ್ ನಮ್ಮ ಗೇಟ್‌ನ

ಒಮ್ಮೆ ನೋಡಿ...

ದೇವಯ್ಯ, ಮುತ್ತಕ್ಕಿ, ರಂಜನ್, ಜೀವನ್ ಎಲ್ಲವೂ ಗೇಟ್‌ನ ಪಕ್ಕಕೆ ಹೋದೊ.

ಗೇಟ್‌ನ ಪಕ್ಕದ ಕಾಂಪೌಂಡ್ ಗೋಡೆಲಿ ಮೂರ್ನಾಕ್ ಪೋಸ್ಟರ್ ಅಂಟೆಸಿದ್ದ್ ಕಂಡತ್. ಕುಟ್ಟ ಅದರ್ನ ಓದಿತ್—

—ಕಳ್ಳ ಸಾವುಕಾರನ ಕೊಲ್ಲುವ ಮಕ್ಕ —ಬೋರ್‌ಗುಡ್ಡೆ ದೇವಯ್ಯ ಬಾರಿ ದೊಡ್ಡ ಮೋಸಗಾರ—ಮಾತಿಗೆ ತಪ್ಪಿರೆ ರಂಜನ್‌ಗೆ ಮರಣದಂಡನೆ—ಬೋರ್‌ಗುಡ್ಡೆ ಬಂಗ್ಲೆಲಿ ಬಾರಿ ದೊಡ್ಡ ವಂಚನೆ.

ಸಾವ್—ಬಾಳ್ ಏನ್‌ಂತ ಗೊತ್ತಿಲ್ಲದ ದೇವಯ್ಯಂಗೆ ಬಾತ್ ದೊಡ್ಡ ಗ್ರಾಚಾರ. ತಲೆ ಹೊಡ್ದ್ ಮಾಡ್ದ ಸೊತ್ತ್ ಅದೇ ಅವನ ಪ್ರಾಣಕ್ಕೆ ಕುತ್ತ್.

'ಅವನ ಅವ್ವನ...ಯಾರ್ ಮಾರಾಯ ಅಂವ. ಮರಣ ದಂಡನೆ ಕೊಡೊಂವ.'

ದೇವಯ್ಯ ಆಳ್ ಕುಟ್ಟಂಗೆ ಜೋರ್ ಮಾಡಿ ಬುಟ್ಟ್ ಒಮ್ಮೆ ಕ್ಯಾಕರಿಸಿ ಉಗ್ದ್ ಮನೆ ಒಳಗೆ ಹೋತ್.

ಆದರೆ ರಂಜನ್‌ಗೆ ಮಾತ್ರ ಮಾದಯ್ಯನ ಹರಿತ ಚಾಕ್ ಕಣ್ಣ್ ಮುಂದೆ ಬರ್ತ ಅಪಾಯುದ ಸೂಚ್‌ನೇಂತ ಅವಂಗೆ ಗೊತ್ತ್‌ತ್.

ಮಾದಯ್ಯ ಯಾರಿಗೂ ಯಾವುದಕ್ಕೂ ಹೆದರಂವ ಅಲ್ಲ ಊರವ್ರ ಸೇರಿಸ್ಕಂಡ್ ಪ್ರತಿಭಟನೆ ಮಾಡ್ಸಿರೆ ಬೋರ್‌ಗುಡ್ಡೆ ದೇವಯ್ಯನ ಮರ್ಯಾದೆ ಬೀದಿ ಪಾಲಾದಂತೂ ಗ್ಯಾರೆಂಟೆನೇಂತ ಎಲ್ಲವುಕೂ ಗೊತ್ತಿತ್ತ್.

'ಈಗ ಎಂತ ಮಾಡ್ದು ಮಜ ?

ಮುತ್ತಕ್ಕಿ ಜೀವನ್‌ನೊಟ್ಟಿಗೆ ಕೇಳ್ತ್.

'ಮಾಡ್ದು ಎಂತ ಮಮ್ಮಾ, ಉಪ್ಪ್ ತಿಂದಂವ ನೀರ್ ಕುಡಿಲಿ ಬುಡ್. ಒಟ್ಟಾರೆ ನಮ್ಮ ಕುಟುಂಬಕ್ಕೇ ಕೆಟ್ಟ ಹೆಸ್ರ್ ಬರಂಗೆ ಉಟ್ಟ್.

ರಂಜನ್ ಏನೂ ಹೇಳದೆ ತಲೆ ಬಗ್ಗಿಸ್ಕಂಡ್ ಮನೆ ಒಳಗೆ ನಡ್ತ್.

ಆಳ್ ಕುಟ್ಟ ಎಲ್ಲ ಪೋಸ್ಟರ್‌ನ ಹರ್ದ್ ಚೆಂಡ್‌ನಂಗೆ ಮಾಡಿ ಕೊಡಿಗೆ ಬಿಸಾಕಿ ಬಿಸಾಕಿ ಹಿಡ್‌ಕಂಡ್ ಆಟ ಆಡ್‌ತಿತ್ತ್.

ಅದಗ್ನೆಲ್ಲ ಇತ್ತ ತಗಂಬಾರ, ಸುಟ್ಟ್ ಹಾಕನಾಂತ ಹೇಳಿಕಂಡ್ ಜೀವನ್ ಅದ್‌ರ್ನ ಕೇಳಿಕಂಡ್ ಒಲೆಗೆ ಹಾಕಿತ್.

'ಅದರ್ಲಿ ಎಂತೆಲ್ಲ ಬರ್ದಿತ್ತ್ ಮಜ ?'

ಮುತ್ತಕ್ಕಿ ಕೇಳ್ತ್

ಆಗ ಕುಟ್ಟ ಉತ್ತರ ಹೇಳ್ತ್.

'ಅದರ್ಲಿ ದೊಡ್ಡ ಯಜಮಾನ್ರನ್ನ ಮೋಸಗಾರಾಂತ ಬರ್ದಿತ್ತ್—ಚಿಕ್ಕಯಜಮಾನಂಗೆ ಮರಣದಂಡನೆ ಗಡ—ಒಂದ್ ರಕ್ತದ ಆಟ ಆಡುವೆ ಗಡ—'

ಕುಟ್ಟ ರಾಗಲಿ ಹೇಳ್ತ್.

'ಅಯ್ಯೋ ನನ್ನ ವೆಂಕಟ್ರಮಣ ದೇವ್ರೆ'

ಎರಡ್ ಕೈಲಿ ತಲೆನ ಹಿಡ್‌ಕಂಡ್ ಮುತ್ತಕ್ಕಿ ಗೋಡೆಗೆ ಒರಗಿ ನೆಲದ ಮೇಲೆ ಕುದ್ದ್‌ಕಂಡತ್. ಅವಳ ಹತ್ರಕ್ಕೆ ಬಂದ ಜೀವನ್ ಮಮ್ಮಿನ ಸಮಾಧಾನ ಮಾಡ್ತ್.

'ಇದ್ಕೆಲ್ಲ ಹೆದ್ರಿಕಾಗ್ದ್ ಮಮ್ಮಿ, ಅವು ಸುಮ್ಮನೆ ನಮ್ಮನ ಹೆದ್ರಿಸಿಕೆ ಈತರ ಕೆಣಿ ಮಾಡಿಯೊಳೊ ಅಷ್ಟೆ.'

ಅಷ್ಟರ್ಲಿ ಬೋರ್‌ಗುಡ್ಡೆ ದೇವಯ್ಯ ತ್ರಿಬಲ್ ಫೈವ್ ಸಿಗರೇಟ್ ಸೇದಿಕಂಡ್ ಹೊಗೆ ಮೇಲೆ ಬುಟ್ಟ್‌ಕಂಡ್ ಬಾತ್. ಅವನ ಮೊಕಲಿ ಬೇಜಾರಕಿಂತ ಕುಸಿ ಎದ್ದ್ ಕಾಣ್ತಿತ್ತ್.

'ಮುತ್ತೂ...'

ಅಂವ ಹೆಣ್ಣ್‌ನ ಕರ್ತ್

'ನಮ್ಮ ಜೀವನ್‌ನ ಮಾತ್ ಸತ್ಯಾಂತ ನಂಗೆ ಅನ್ಸಿದೆ. ರಂಜು—ಗೌರನ ಸಮಸ್ಯೆ ಈಗ ಜೀವನ್‌ನ ಪ್ರೆಸ್ಟೀಜ್ ಕೂಡ ಹೌದು, ಆ ಮಾದಯ್ಯ ಜನಗಳ ಸೇರಿಸ್ಕಂಡ್ ಮೆರವಣಿಗೆ, ಪ್ರತಿಭಟನೆ ಮಾಡ್ರೆ ಊರಿಡೀ ಗೊತ್ತಾಗ್ಟೆ ಇರ್ದ್ದಲೆ. ಮೊದ್ಲೇ ಆ ನಾಡ್ ಕೊಲ್ಲಿ ಮಾದಪ್ಪನ ಕಂಡ್ರೆ ಊರವ್ಕೆಲ್ಲ ಏನೋ ಒಂದ್ ತರದ ಪ್ರೀತಿ. ಮಾದಪ್ಪನ ಮಗ್ಳನ ನಮ್ಮ ರಂಜು ಕೆಡ್ಸಿತ್‌ಂತ ಗೊತ್ತಾದ್ರೆ ಎಲ್ಲ ನಮ್ಮ ಮುಂದೆ ತಿರ್ಗಿ ನಿಲ್ಲುದಂತೂ ಗ್ಯಾರೆಂಟಿ. ಅವು ಕೇಸ್ ಕೊಟ್ಟರೆ ನಾವೇ ಸಿಕ್ಕಿಹಾಕ್ಕಂಡವೆ. ಪೊಲೀಸ್‌ಗ ಸನ ಇಂತ ವಿಷಯುಲಿ ನಾವ್ಗೆ ಸಹಾಯು ಮಾಡ್‌ಕಿಲೆ. ಅದರ್‌ಂದ ಜೀವನ್ ಹೇಳ್ದಂಗೆ ನಮ್ಮ ರಂಜುಗೆ ಗೌರನ ತಂದ್ ಮೊದ್ವೆ ಮಾಡೊನೂ. ಈ ಮೊದ್ವೆನ ಬೇಗ ಮಾಡ್ವೊನು, ನಾಡ್ ಕೊಲ್ಲಿ ಮಾದಪ್ಪ ಡೌರಿ ಕೊಡ್ದೇ ಇದ್ರೂ ಪರ್ವಾಗಿಲ್ಲೆ. ನಮಗೆ ಆ ದೇವ್ರು ಬೇಕಷ್ಟ್ ಆಸ್ತಿ ಕೊಟ್ಟುಟ್ಟಲ್ಲ.' ದೇವಯ್ಯ ಹೇಳ್ತ್.

[ಸಶೇಷ]

---

## ಹೈದ

ಬಾಬ್‌ಕಟ್ ಕೂದಲ್
ಜೀನ್ಸ್‌ಪ್ಯಾಂಟ್, ಟೀ ಶರ್ಟ್
ಕಿವಿಗೆ ರಿಂಗ್
ಕಾಲಿಗೆ ಚಪ್ಪಲ್ ಹಾಕಿಕಂಡಿದ್ದವಳ್ನ
ನೋಡಿ
ವಿಷಲ್ ಹಾಕಿ ಹೇಳ್ದೆ 'ಹಾಯ್'
ಅವ್ಳ್ ತಿರ್ಗಿ ನನ್ನ ನೋಡ್ತ್,
ಆದರೆ ಅದ್ 'ಅವ್ಳ್' ಅಲ್ಲ ಅದ್ 'ಅಂವ'

—ಯಾಲದಾಳು ಚಂದ್ರಕಲಾ,
ಮಡಿಕೇರಿ.





ಮೈಸೂರಿನ ಝಾನ್ಸಿ ತಂಡದಿಂದ "ಮೂಡಲ್ ಕುಣಿಗಲ್" ಹಾಡಿನ ಒಂದು ದೃಶ್ಯ





ಮೈಸೂರಿನ ಝಾನ್ಸಿ ತಂಡದಿಂದ "ಹಬ್ಬ ಹಬ್ಬ" ಹಾಡಿನ ನೃತ್ಯ



ಕಾವೇರಿ ನಾಡು ತಂಡ - ನಮ್ಮೂರ ಸಂಸ್ಕೃತಿ ನಾಷ್ಗಿರಕು ನೃತ್ಯ



ಕಾವೇರಿ ನಾಡು ತಂಡದಿಂದ - ಸುಗ್ಗಿ ಸುವ್ವಾಲಿ ಕುಣಿತ



ಕಾವೇರಿ ನಾಡು ತಂಡದಿಂದ ನೃತ್ಯ



ಕಾವೇರಿ ನಾಡಿನ ತಂಡದಿಂದ "ನಮ್ಮದ್ ಇದ್ ನಮ್ಮದ್" ಹಾಡಿನ ದೃಶ್ಯ



ಕಾವೇರಿ ನಾಡಿನ ಕಾವೇರಿ ಪ್ರತಿಮೆಯ ಮುಂಭಾಗದಲ್ಲಿರುವ ಪುಷ್ಕರಿಣಿ.



ಶ್ರೀಮತಿ ಅಮ್ಮಾಜೀರ ಲೀಲಾವತಿ ಪೊನ್ನಪ್ಪನವರಿಂದ ಪಟ್ಟಡ ಪ್ರಭಾಕರ್‌ರವರು ನೆನಪಿನ ಕಾಣಿಕೆ ಸ್ವೀಕರಿಸುತ್ತಿರುವುದು



ಮುಖ್ಯ ಅತಿಥಿ ಪಟ್ಟಡ ಪ್ರಭಾಕರನವರಿಂದ ಅಣ್ಣೇಚೀರ ಚಿಣ್ಣಪ್ಪನವರು ನೆನಪಿನ ಕಾಣಿಕೆ ಸ್ವೀಕರಿಸುತ್ತಿರುವುದು.



ಕೊಡಗು ಸಂಗಾತಿ ಬಳಗ



ಕಾವೇರಿ ನಾಡಿನ ಸಂಸ್ಥಾಪಕ ಶ್ರೀ ಅಮ್ಮಾಜೀರ ಪೊನ್ನಪ್ಪನವರು



ಎನ್. ಎಸ್. ದೇವಿಪ್ರಸಾದ್‌ರವರಿಂದ ಕಾವೇರಿ ನಾಡಿನಲ್ಲಿ ಶ್ರೀ ಕಾವೇರಿ ಮಾತೆಯ ಉದ್ಘಾಟನೆಯ ಒಂದು ದೃಶ್ಯ




ಮುಖ್ಯ ಅತಿಥಿಗಳಾಗಿ ಎಡದಿಂದ ಬಲಕ್ಕೆ ನಿಡ್ಯಮಲೆ ಪ್ರಕಾಶ್, ಅಮೆ ಸೀತಾರಾಮ್, ಕುಂಚಡ್ಕ ಉಲ್ಲಾಸ, ಎನ್.ಎಸ್. ದೇವಿಪ್ರಸಾದ್, ದಂಬೆಕೋಡಿ ಆನಂದ, ಬೈತಡ್ಕಜೋಯಪ್ಪ ಮತ್ತು ಪಟ್ಟಡ ಪ್ರಭಾಕರನವರುಗಳು



ಅಮ್ಮಾಜೀರ ದಂಪತಿಗಳು ಮಾತೆ "ಶ್ರೀ ಕಾವೇರಿ ಪ್ರತಿಮೆಯೊಂದಿಗೆ"

## ವಿ ನಂ ತಿ

"ಜನಾಂಗದ ಪ್ರಗತಿಗಾಗಿ ಕೊಡಗು ಸಂಗಾತಿಯ ಪ್ರತಿ ಚಂದದಾರರು ಒಬ್ಬೊಬ್ಬ ಹೊಸ ಚಂದದಾರರನ್ನು ಮಾಡುವಂತೆ ಮಾನ್ಯ ಚಂದದಾರರಲ್ಲಿ ವಿನಂತಿ"

—ಸಂಪಾದಕಿ

---

## ಕೋ ರಿ ಕೆ

ದಿನಾಂಕ **1-9-98** ರಿಂದ ಅಂಚೆ ದರ ಅನಿವಾರ್ಯವಾಗಿ ಪರಿಷ್ಕೃತವಾದ ನಿಮಿತ್ತ ಪ್ರಿಯ ಓದುಗರು ಕಳುಹಿಸುವ ಲೇಖನ ಕಥೆಗಳಿಗೆ ಸರಿಯಾದ ಅಂಚೆ ಚೀಟಿ ಲಗತ್ತಿಸುವಂತೆ ಸಂಗಾತಿಯ ಕೋರಿಕೆ.

—ಸಂಪಾದಕಿ

---

## ಪ್ರಾ ರ್ಥ ನೆ

ಅಂಚೆ ದರ ಪರಿಷ್ಕೃತಗೊಂಡ ಬಾಪ್ತು ಸಂಗಾತಿಯ ಬೆಲೆಯಲ್ಲಿ ಹೆಚ್ಚಳವಾಗುವ ಸಂಭವವಿರುವುದರಿಂದ ಮಾನ್ಯ ಸದಸ್ಯರು ಶೀಘ್ರವಾಗಿ ನವೀಕರಿಸಿಕೊಳ್ಳುವಂತೆ ಚಂದದಾರರಲ್ಲಿ ಪ್ರಾರ್ಥನೆ.

—ಸಂಪಾದಕಿ

---

## ಇ ತ್ತ ಗ ಮ ನಿ ಸಿ

ಕಥೆ, ಕವನ, ಲೇಖನ ಇತ್ಯಾದಿಗಳನ್ನು ಬರೆದು ಕಳುಹಿಸುವವರು ಸ್ಪಷ್ಟವಾಗಿ, ದಪ್ಪ ಅಕ್ಷರಗಳಲ್ಲಿ ಹಾಳೆಯ ಒಂದೇ ಬದಿಯಲ್ಲಿ ಹಾಗೂ ಒಂದು ಹಾಳೆಯಲ್ಲಿ ಒಂದೇ ಲೇಖನ, ಕತೆ, ಕವನಗಳನ್ನು ಬರೆದು ಕಳುಹಿಸುವಂತೆ ಕೋರಲಾಗಿದೆ.

—ಸಂಪಾದಕಿ

---

**ಶೀಘ್ರವೇ ನಿರೀಕ್ಷಿಸಿ !!!**

## ಬೆಂಗಳೂರಿನ ದೂರದರ್ಶನದಲ್ಲಿ ಗೌಡ ಸಾಂಸ್ಕೃತಿಕ ಕಾರ್ಯಕ್ರಮ

ದಿನಾಂಕ **1-10-98**ರಂದು ಮಡಿಕೇರಿಯಲ್ಲಿ ನಡೆದ ದಸರ ನಾಡಹಬ್ಬದ ಕಾರ್ಯಕ್ರಮದಲ್ಲಿ ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಯಿಂದ ಬೆಂಗಳೂರಿನ ಶ್ರೀ ಅಮ್ಮಾಜಿರ ಪೊನ್ನಪ್ಪ ತಂಡದವರಿಂದ ಜ್ಯೋತಿಯ ಬೆಳಗೋಣ, ಕಾವೇರಿ ನಾಡನ್ನು ಕಟ್ಟೋಣ, ನಮ್ಮದ್ ಇದ್ ನಮ್ಮದ್ ಮತ್ತು ಸುಗ್ಗಿ ಸುವ್ವಾಲೆ ಕುಣಿತವು ದಸರ ಕಾರ್ಯಕ್ರಮದಡಿಯಲ್ಲಿ ಮೂಡಿ ಬರಲಿದೆ. ಬಾಂಧವರು ಈ ಕಾರ್ಯಕ್ರಮವನ್ನು ತಪ್ಪದೇ ವೀಕ್ಷಿಸಿ. —ಸಂ

K.R.N.N. 240

10-01-96 TCI Kar. 09592

# ಯುವ ಪೀಳಿಗೆಗೊಂದು ಸುವರ್ಣಾವಕಾಶ

## ಗುರು ಕಾರೋಣರನ್ನು ನೆನೆಯೋಣ ಬನ್ನಿ

ಅಮರ ಸುಳ್ಯ ಕ್ರಾಂತಿಯಲ್ಲಿ ಭಾಗವಹಿಸಿದ ನಮ್ಮ ಜನಾಂಗದ ಹಿರಿಯರ ಮತ್ತು ನಂತರದ ಪೀಳಿಗೆಯಲ್ಲಿ ನಮ್ಮ ಅರೆಭಾಷೆ ಗೌಡ ಸಮಾಜಕ್ಕೆ ಅಪಾರ ಸೇವೆ ಸಲ್ಲಿಸಿದವರ ವಿವರಗಳು ಮತ್ತು ಫೋಟೋಗಳು ಬೇಕಾಗಿದೆ. ಫೋಟೋ ಇಲ್ಲದೆ ಇದ್ದರೆ ಅವರ ಈಗಿನ ಸಂತತಿಯವರ ಮುಖ ಲಕ್ಷಣಕ್ಕೆ ಹೋಲುವ ರೇಖಾಚಿತ್ರ, ಬರೆದು ಕಳುಹಿಸಿ. ಉತ್ತಮವಾಗಿರುವ ಚಿತ್ರಗಳನ್ನು ಪತ್ರಿಕೆಯಲ್ಲಿ ಹಂತ ಹಂತವಾಗಿ ಪ್ರಕಟಿಸುತ್ತೇವೆ. ಸಮಾಜದ ಹಿರಿಯರನ್ನು ನೆನೆಯುವ ಕಾಲ ಈಗ ಕೂಡಿಬಂದಿದೆ. ಹಿರಿಯರನ್ನು ಸ್ಮರಣೆಗೈಯುವುದು ಯುವ ಪೀಳಿಗೆಯ ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯ ಹೌದಾಗಿದೆ. ಉತ್ತಮ ಚಿತ್ರ, ಲೇಖನಕ್ಕೆ ಬಹುಮಾನ ಕೊಡಲಾಗುವುದು.

| | |
|---|---|
| 1. ಗುಡ್ಡೆಮನೆ ಅಪ್ಪಯ್ಯಗೌಡ | 2. ಗುಡ್ಡೆಮನೆ ತಿಮ್ಮಯ್ಯಗೌಡ |
| 3. ಕೆದಂಬಾಡಿ ರಾಮಯ್ಯಗೌಡ | 4. ಕುಕ್ಕುನೂರು ಚಿಣ್ಣಯ್ಯಗೌಡ |
| 5. ಕೂಜುಗೋಡು ಮಲ್ಲಪ್ಪ | 6. ಮಣಿಯನ ರಂಗಪ್ಪ |
| 7. ಸಿರಕಜೆ ಮಲ್ಲಯ್ಯ | 8. ಕುಡೆಕಲ್ಲು ಪುಟ್ಟ |
| 9. ಕುಂಚಡ್ಕ ತಿಮ್ಮಯ್ಯ | 10. ದೇರಾಜೆ ಬಚ್ಚ |
| 11. ಗುಡ್ಡ ಸುಬ್ಬಪ್ಪ | 12. ಕೂಜುಗೋಡು ಅಪ್ಪಯ್ಯ |

ಅಮರಕ್ರಾಂತಿಯ ನಂತರದ ಕಾಲಘಟ್ಟದಲ್ಲಿ ಕಂಡ ಪ್ರಮುಖರು ಕುಂಭುಗೌಡನ ಕುಶಾಲಪ್ಪ, ನಿಡ್ಯಮಲೆ ರಾಮಪ್ಪ, ನಿಡ್ಯಮಲೆ ಮುದ್ದಪ್ಪ, ನಿಡ್ಯಮಲೆ ಸೋಮಣ್ಣ, ನಂಜಯ್ಯನ ಸಣ್ಣಯ್ಯ ಪಟೇಲ್, ಸಂಪಾಜೆ. ತದ ನಂತರದಲ್ಲಿ ಕೋರನ ದೇವಯ್ಯ, ಕೂಜುಗೋಡು ವೆಂಕಟರಮಣಗೌಡ, ಪಾಂಡನ ಸುಬ್ಬಯ್ಯ, ಕೂಜುಗೋಡು ಸುಬ್ರಮಣ್ಯಗೌಡ, ಅಂಬೆಕಲ್ಲು ಮುತ್ತಯ್ಯಗೌಡ, ಡೇವಪ್ಪಜ್ಜನ ವೀರಪ್ಪಗೌಡ, ಚೆರಿಯಮನೆ ಪೊನ್ನಪ್ಪ, ಪೂಜಾರಿ ರಾಮಪ್ಪ, ತೋಟಂಬೈಲು ಮಾದಪ್ಪ, ಪೇರಿಯನ ಪೂವಯ್ಯ, ದಂಬೆಕೋಡಿ ಸುಬ್ರಾಯ, ಹೊದ್ದೆಟಿ ವೆಂಕಪ್ಪ, ಚೌಡ್ಲು ಕಾಳಪ್ಪ, ಹುದೇರಿ ಉತ್ತಪ್ಪ, ಕೊ. ಸ. ಕಾರ್ಯಪ್ಪ ಇತ್ಯಾದಿ ಹಾಗೂ ಇನ್ನು ಉಳಿದ ಹಲವರು.

ಈ ನಿಟ್ಟಿನಲ್ಲಿ ಸಂಬಂಧಪಟ್ಟ ಮಾಹಿತಿಗಳನ್ನು ಗೌಡ ಸಮಾಜಗಳು, ವಿದ್ಯಾ ಸಂಘಗಳು, ಗೌಡ ಸಾಂಸ್ಕೃತಿಕ ಅಕಾಡೆಮಿ, ಮಹಿಳಾ ಒಕ್ಕೂಟ ಹಾಗೂ ಇನ್ನಿತರ ಯುವ ಸಂಘ ಸಂಸ್ಥೆಗಳು ಕಾರ್ಯ ಪ್ರವರ್ತರಾಗಿ ಸಹಕರಿಸುವಂತೆ ಕೋರುತ್ತಾ ಈ ಮೇಲಿನ ಮಾಹಿತಿಯನ್ನು **ಕೊಡಗು ಸಂಗಾತಿ** ಪತ್ರಿಕೆ, ಜಯಲಕ್ಷ್ಮಿಪುರಂ, ಮೈಸೂರು–12. ಇಲ್ಲಿಗೆ ಕಳುಹಿಸಿಕೊಡುವಂತೆ ಸಂಗಾತಿ ಬಯಸುತ್ತದೆ.

—ಸಂಪಾದಕಿ



Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA. P. SHEELAMANI, No. 35, 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771